# ಶೂದ್ರ

ಬೆಲೆ: 2 ರೂ.



ಈ ಸಂಚಿಕೆಯಲ್ಲಿ :

ಜಿ. ಪಿ. ಬಸವರಾಜ್—ಬರಗೂರು ರಾಮಚಂದ್ರಪ್ಪ—ಎಸ್. ರಾಮಚಂದ್ರ—ರಾಮಚಂದ್ರ ಪೈ—ರಾಮಚಂದ್ರದೇವ—ಬಿ. ರಾಜಣ್ಣ—ಬಂಡಗದ್ದೆ ರಾಧಾಕೃಷ್ಣ—ಪಿ. ಆರ್. ತಿಪ್ಪೇಸ್ವಾಮಿ—ಯಶವಂತ ಚಿತ್ತಾಲ ಬಸಪ್ಪ ಬೆಳವಾಡಿ—ಎಸ್. ಜಿ. ಸಿದ್ಧರಾಮಯ್ಯ—ಸುವರ್ಣ ಕಾಡನಕುಪ್ಪೆ ಸ್ವಾಮಿನಾಥ್—ಲಲಿತಾಂಬ—ಗಿರೀಶ್ ಕಾರ್ನಾಡ್—ವಿಶಾಲ ಭಟ್ ಕನಸಿಗೊಂದು ಕಣ್ಣು.

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 7 ಏಪ್ರಿಲ್ 1986 ಸಂಪುಟ : 11

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ—ಆನಂದಮೂರ್ತಿ—ಮಹೇಶ್

ಮುಖಪುಟ : ಕೆ. ಜಿ. ಸುಬ್ರಹ್ಮಣ್ಯಂ ಕೃಪೆ : ಮರಿಶಾಮಾಚಾರ್
ಹಿಂಬದಿ ಪುಟ : ಪೆಟ್ರಿಕ್ ವಾಲ್ಡ್‌ಬರ್ಗ್

ಶೂದ್ರಬರದಿದ್ದರೆ ಪತ್ರಬರೆಯಿರಿ. ಚಂದಾಕಳಿಸಿ. ನಿಮ್ಮ ಗೆಳೆಯರನ್ನು ಶೂದ್ರಕ್ಕೆ ಚಂದಾದಾರರನ್ನಾಗಿಸಿ ಲೇಖನ ಕಳಿಸುವಾಗ 15 ಪೈಸೆಯ ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಚಂದಾ ಕಳಿಸುವವರು 24 ಕ್ಕೆ ತುಂಬಬೇಕು.

ವಾರ್ಷಿಕ ಚಂದಾ : 22 ರೂ.

ಆಜೀವ ಚಂದಾ : 250 ರೂ. (ಐದು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜು ಅಂಚೆ,
ಬೆಂಗಳೂರು–560 029

'ಕನಸಿಗೊಂದು ಕಣ್ಣು' ಪುಸ್ತಕ ರೂಪದಲ್ಲಿ ಬಂದಿದೆ. ಶೂದ್ರದ ಚಂದಾದಾರರಿಗೆ 10ರೂ. 15ರೂಗೆ ಬದಲು.

ಶೂದ್ರದ 'ಅಂಕಣ್ಣ' ಕಾವ್ಯಸ್ಪರ್ಧೆಗೆ ಕವನ ಕಳಿಸಲು ಕೊನೆಯದಿನ ಏಪ್ರಿಲ್ 15ರಂದು ಒಟ್ಟು ಎರಡು ಬಹುಮಾನಗಳು : 200ರೂ.

'ಶ್ರೀ ಲಂಕೇಶ್'ರವರ ಸಾಹಿತ್ಯ ಕುರಿತು ವಿಚಾರ ಸಂಕಿರಣ ಜೂನ್ 15ರಂದು ಭಾನುವಾರ. ಬನ್ನಿ ಭಾಗವಹಿಸಿ.

ದಿ॥ ಗೋಪಾಲಗೌಡ ಹಾಗೂ ದಿ॥ ಎಸ್. ವೆಂಕಟರಾಂ ನೆನಪಿನ ವೇದಿಕೆಯಿಂದ 'ಶೂದ್ರ' ನಡೆಸುವ ಪ್ರಬಂಧ ಸ್ಪರ್ಧೆಗೆ ಪ್ರಬಂಧ ಕಳಿಸಲು ಕೊನೆಯ ದಿನ ಮೇ 15.
ವಿಷಯ: 1) ಗಾಂಧಿ ನಂತರದ ಭಾರತದ ರಾಜಕೀಯ 2) ಭಾರತದಲ್ಲಿ ಕಮ್ಯುನಿಸ್ಟ್ ಚಳವಳಿಯ ಸೋಲುಗೆಲುವುಗಳು. 300ರೂ.ಗಳ ಎರಡು ಬಹುಮಾನ.

# ತೀರ

— ಜಿ. ಪಿ. ಬಸವರಾಜ್

ಕಥೆ

ಮೋಡಗಳಿಲ್ಲದ ಖಾಲಿ ಆಕಾಶ ಭಣಗುಡುಗುತ್ತಿತ್ತು. ನಿಷ್ಕರುಣಿ ಸೂರ್ಯ ಬೆಂಕಿ ಉಗುಳುತ್ತಲೇ ಇದ್ದ. ಸಮುದ್ರದ ಘೋರ್ಗರೆತ ಶ್ರುತಿ ಹಿಡಿದೇ ಇತ್ತು. ನೊರೆ ಗೆರೆಯುವ ಅಲೆಗಳು ಒಂದರ ಬೆನ್ನು ಹತ್ತಿ ಇನ್ನೊಂದು ಬರುತ್ತಲೇ ಇದ್ದವು. ನೆಲ-ದಲ ಗಳ ಮಧ್ಯೆ ಗೆರೆಕೊರೆದಂತೆ, ಎರಡು ಪ್ರಪಂಚಗಳನ್ನು ಬೇರ್ಪಡಿಸಿದಂತೆ ಉದ್ದಕ್ಕೆ ಚಾಚಿಕೊಂಡ ತೀರ ಕಾದು ಕರಕಾದ ಮರಳು.

ಅವರು ತೀರದ ಅಂಚು ಹಿಡಿದು ಮಕ್ಕಳಂತೆ ಓಡಿದರು. ಅಲೆಗಳೊಂದಿಗೆ ಆಟವಾಡಿದರು. ಸಾಗರದ ಅನಂತ ನೀಲಿಯನ್ನು ಕಣ್ಣಲ್ಲೆ ಅಳೆದು ದಣಿದರು. ನೀಲಿಯ ಏಕತಾನತೆ ಮರೆಯಲು, ದೂರದಲ್ಲಿ ಕಪ್ಪು ಚುಕ್ಕಿಯಂತೆ ಕಾಣುವ ನಾವೆಯನ್ನು, ಅದು ತೇಲುವ ಪರಿಯನ್ನು ನೋಡಿದರು. ಆಕಾಶದ ನೀಲಿಯನ್ನು ಸಮುದ್ರದ ನೀಲಿ ಯೊಂದಿಗೆ ಹೋಲಿಸಿದರು. ಅವೆರಡೂ ಕೂಡಿದಂಥ, ಗೆರೆಎಳೆದಂಥ ಜಾಗದ ವಿವರ ಗ್ರಹಿ ಸಲು ಕಣ್ಣು ಕಿರಿದು ಮಾಡಿ ದೃಷ್ಟಿ ಹರಿತ ಮಾಡಿದರು.

ನಿಧಾನಕ್ಕೆ ಒಬ್ಬರ ಕೈ ಇನ್ನೊಬ್ಬರು ಹಿಡಿದು ಅಲೆಗಳನ್ನು ಅಡ್ಡಗಟ್ಟುತ್ತ ಸಮು ದ್ರದಲ್ಲಿ ನಡೆದರು. ಕಾಲಡಿಯಲ್ಲಿನ ಮರುಳು ಕೊರೆದಂತೆ, ಅಲೆಅಲೆಯ ಹಿಂದಕ್ಕೆ ತಳ್ಳಿದಂತೆ ಆಕೆ 'ಹೋ' ಎಂದು ಹುಮ್ಮಸ್ಸಿನಿಂದ ಕೂಗಿದಳು. ಆತ ಅವಳ ಕೈ ಹಿಡಿದು ಜಗ್ಗುತ್ತ ಸಮುದ್ರವನ್ನು ಸೀಳುವವನಂತೆ ನಡೆದ. ಆಕೆ 'ಸಾಕು ಸಾಕು' ಎಂದಳು. ಆತ 'ಏನೂ ಆಗೋಲ್ಲ' ಎಂದು ಆಕೆಯನ್ನು ಜಗ್ಗಿಸಿ ಎಳೆದ. ಆತ ಎಳೆದ ರಭಸಕ್ಕೆ ಆಕೆಯ ದೇಹ ಜೋಲಿ ಹೊಡೆದು, ಆತನ ಮೇಲೊರಗಿತು. ಅದೇ ಹೊತ್ತಿಗೆ ದೊಡ್ಡ ಅಲೆಯೊಂದು ದಡಕ್ಕೆ ಅಪ್ಪಳಿಸಿ ಇಬ್ಬರೂ ಅರ್ಧ ನೆನೆದರು. 'ಅಲ್ಲಿ ನೋಡು, ಎಂಥ ದೊಡ್ಡ ಅಲೆ ಬರುತ್ತಿದೆ' ಎಂದನಾತ. ಆಕೆ ನೋಡಿದಳು. ಅಂಥವೆ ನೂರಾರು ಅಲೆ ಗಳು ಒಂದರ ಹಿಂದೆ ಬಂದು ಅಥವಾ ಒಂದರೊಳಗೊಂದು. ಆತ ಹೇಳಿದ್ದು ಯಾವು ದು ಎಂದು ಆಕೆ ಗಲಿಬಿಲಿಯಲ್ಲಿರುವಾಗಲೇ ಬಂದ ಅಲೆ ಇಬ್ಬರಿಗೂ ರಾಚಿ ಬಡಿದು ದಡ ಸೇರಿತು. ತನ್ನ ಮುಖಕ್ಕೆ ಬಂದು ಸಿಡಿದ ನೀರನ್ನಾಕೆ ನಾಲಗೆಯಿಂದ ನೆಕ್ಕಿ, 'ಥೂ !

---

ಜಿ.ಪಿ ಬಸವರಾಜ್, 12 ಮಿಲಾಗ್ರೀಸ್ ಸೆಂಟರ್, ಹಂಪನಕಟ್ಟೆ, ಮಂಗಳೂರು-575001

ಉಪ್ಪುಪ್ಪು' ಎಂದಳು. ಆತ ಅವಳಿಂದ ಕೈ ಬಿಡಿಸಿಕೊಂಡು ಬೊಗಸೆಯಲ್ಲಿ ಎತ್ತಿ ಒಂದಿಷ್ಟು ನೀರು ಬಾಯಿಗೆ ಹಾಕಿಕೊಂಡು, ಹಾಗೇ ಸಮುದ್ರಕ್ಕೆ ಉಗಿದ. ಅವಳೂ ಹಾಗೇ ಮಾಡಿದಳು. ಮತ್ತೊಂದು ಬೊಗಸೆ ನೀರೆತ್ತಿ ಅವನಿಗೆ ಎರಚಿದಳು. 'ಹಾ!' ಎಂದು ಹಿಂದೆ ಸರಿದ ಆತ, ತಾನೊಂದು ಬೊಗಸೆ ನೀರು ಮೊಗೆದು ಅವಳಿಗೆ ರಾಚಿದ. ಇಬ್ಬರ ಓಕುಳಿಯಾಟವನ್ನು ನೋಡಿ ಸುಖಿಸದ ಆನೆ ಗಾತ್ರದ ಅಲೆಯೊಂದು ಬಂದು ಅಪ್ಪಳಿಸಿದ ರಭಸಕ್ಕೆ ಅವಳು ಬೆಚ್ಚಿ, ಜೋಲಿ ತಪ್ಪಿ, ಮತ್ತೆ ಸಮತೋಲ ಕಾಯ್ದು ದಡಕ್ಕೆ ಓಡಿದಳು. ಅವನು ನಗುತ್ತ ಹಿಂಬಾಲಿಸಿದ.

ಆತನ ಪ್ಯಾಂಟಿನ ಕೆಳ ಅರ್ಧ ಪೂರ್ಣ ನೆನೆದಿತ್ತು. ಅವಳ ಸೀರೆಯೂ ತೊಯ್ದು ತಪ್ಪಡೆಯಾಗಿತ್ತು. ಒಂದು ಕೈಯಲ್ಲಿ ಸೀರೆಯ ನಿರಿಗೆಯನ್ನು ಎತ್ತಿ ಹಿಡಿದು, ದಡದಲ್ಲಿದ್ದ ಹೈಹೀಲ್ಡ್ ಚಪ್ಪಲಿಯನ್ನು ಇನ್ನೊಂದು ಕೈಯಲ್ಲಿ ಎತ್ತಿಕೊಂಡು ಆಕೆ, ದಂಡೆಯ ತಮ್ಮ ಬ್ಯಾಗುಗಳಿದ್ದ ಕಡೆಗೆ ಓಡಿದಳು. ಆತ ಚಪ್ಪಲಿ ಸಿಕ್ಕಿಸಿಕೊಂಡು, ನೀರು ತೊಟ್ಟಿಕ್ಕುತ್ತಿದ್ದಂತೆಯೇ ಅವಳನ್ನು ಹಿಂದೆ ಹಾಕುವಂತೆ ಓಡಿದ.

ಅವನಿಗೆ ಪ್ರಿಯವಾದ ಭಂಗಿ. ಒಂದು ಕೈಯಲ್ಲಿ ಹೈ ಹೀಲ್ಡ್, ಇನ್ನೊಂದು ಕೈಯಲ್ಲಿ ಸೀರೆಯ ನಿರಿಗೆ ಹಿಡಿದು ಅವಳು ಓಡುತ್ತಿದ್ದರೆ ಅವನು ಯಾವಾಗಲೂ ಭಾವುಕನಾಗಿಬಿಡುತ್ತಿದ್ದ. 'ಒಂದ್ನಿಮ್ಷ, ಹಾಗೇ ನಿಲ್ಲು' ಎಂದ. ಅವಳು ಗೊಂಬೆಯಂತೆ ನಿಂತಳು. ಅವನು ಲಗುಬಗೆಯಿಂದ ಓಡಿ ಬ್ಯಾಗುಗಳ ಜೊತೆಯಲ್ಲಿದ್ದ ಕ್ಯಾಮೆರಾ ತಂದ. ಒಂದು, ಎರಡು ಮೂರು–ಕ್ಲಿಕ್, ಕ್ಲಿಕ್, ಕ್ಲಿಕ್ 'ಎಲ್ಲಿ ಹೀಗೆ ನಿಲ್ಲು ಸಮುದ್ರದ ಹಿನ್ನೆಲೆ ಬರುವಂತೆ' ಎಂದು ಅವಳನ್ನು ಹಿಡಿದು, ತನಗೆ ಬೇಕಾದಂತೆ ತಿರುಗಿಸಿ 'ಕ್ಲಿಕ್' ಮಾಡಿದ. ನೀಲ ರಾಣಿ ಸಮುದ್ರ ದೇವಿಯೂ ಅಲೆ ಎಬ್ಬಿಸುತ್ತ ಸಂಭ್ರಮದಿಂದ ಕ್ಯಾಮೆರಾದಲ್ಲಿ ಸೆರೆಯಾದಳು.

ಇಬ್ಬರು ಬಟ್ಟೆಗಳನ್ನು ಝಾಡಿಸಿ, ಬ್ಯಾಗುಗಳನ್ನು ಹೇಗಲಿಗೇರಿಸಿಕೊಂಡು ತೀರದ ಗುಂಟ ನಡೆಯತೊಡಗಿದರು. ಉದ್ದಕ್ಕೆ ಬಿದ್ದುಕೊಂಡ ತೀರ. ಸಮುದ್ರದ ಮೇಲಿಂದ ಬೀಸಿ ಬರುವ ಗಾಳಿ ನೆತ್ತಿಯ ಮೇಲೆ ಉರಿಯುವ ಸೂರ್ಯ. ಕೈಯಲ್ಲಿ ಕೈ ಬೆಸೆದು, ಮರಳಲ್ಲಿ ಹೂತು ಹೋಗುವ ಪಾದಗಳನ್ನು ಕೀಳುತ್ತ ಅವರು ನಡೆದರು.

ಸಮುದ್ರಕ್ಕೆ ಇನ್ನಷ್ಟು ಹತ್ತಿರ ಹೋಗೋಣ. ಅಲ್ಲಿ ಮರಳು ಹೀಗಿರುವುದಿಲ್ಲ. ನಡೆಯಲು ಸುಲಭ ಎಂದಳು ಆಕೆ, ಇಬ್ಬರೂ ಮತ್ತೆ ಸಮುದ್ರದ ಅಂಚಿಗೆ ಬಂದರು.

'ಕಪ್ಪೆ ಚಿಪ್ಪು' ಎಂದು ಕೈ ತಟ್ಟಿದಳು ಆಕೆ. 'ಶಂಕು' ಎಂದು ನಕ್ಕ ಈತ. ಇಬ್ಬರೂ ಉತ್ಸಾಹದಿಂದ ಬಗ್ಗಿ ಎತ್ತಿಕೊಂಡರು. ಪರೀಕ್ಷಿಸಿದರು. ಮುಟ್ಟಿ ಮುಟ್ಟಿ ಆನಂದಿಸಿದರು. ಅದಲು ಬದಲು ಮಾಡಿಕೊಂಡರು. ಮೆಚ್ಚುಗೆ ಸೂಚಿಸಿದರು. ಅಪೂರ್ವ ವಸ್ತುವೊಂದನ್ನು ಅಚಾನಕವಾಗಿ ಪಡೆದ ಹುಮ್ಮಸ್ಸಿನಲ್ಲಿ ಅವುಗಳನ್ನು ಭದ್ರವಾಗಿ ಬ್ಯಾಗುಗಳಲ್ಲಿಕೊಂಡು ಹೆಜ್ಜೆ ಹಾಕಿದರೆ ಮತ್ತೆ ಅಂಥವೇ ಕಪ್ಪೆ ಚಿಪ್ಪುಗಳು ; ಶಂಕುಗಳು ಇಬ್ಬರೂ ಇನ್ನಷ್ಟು ಎತ್ತಿಕೊಂಡರು. ಮೊದಲು ಸಿಕ್ಕಿದ್ದಕ್ಕಿಂತ ಇದು ಇನ್ನಷ್ಟು ಚಂದ ಅನಿಸಿ ಇವುಗಳನ್ನು ಬ್ಯಾಗಿಗೆ ತುಂಬಿಕೊಂಡರು. ಹಗುರಾಗಿ ಮರಳಲ್ಲಿ ಹೆಜ್ಜೆ ಗುರುತು ಮಡಿಸುತ್ತಾ ನಡೆದರು.

'ಇಲ್ಲಿ ನೋಡು' ಎಂದಳು ಆಕೆ. ಆತ ನೋಡಿದ. ಇನ್ನಷ್ಟು ಹತ್ತಿರ ಸರಿದು ನೋಡಿದರೆ ಆ ಏಡಿ ಪುಳಕ್ಕನೆ ಒಳಸರಿದು ಹೋಯಿತು. 'ಅರೆ' ಎಂದಾತ ಹಾಗೆಯೇ ಕಣ್ಣರಳಿಸಿ ಮುಂದೆ ನಡೆದರೆ ಅದೇ ಬಗೆಯ ಏಡಿಗಳು. ಪುಳುಪುಳು ನಡೆದು ಗೂಡಿನೊಳಕ್ಕೆ ಸರಿದು, ಮರೆಯಾಗುವ ಚಿತ್ರ. 'ಇಷ್ಟು ಹೊತ್ತು ಕಾಣಿಸಲೇ ಇಲ್ಲವಲ್ಲ' ಎಂದವರು ಏಡಿಗಳ ಅಥವಾ ಅವರು ಹಾಗೆಂದುಕೊಂಡ ಸಮುದ್ರ ಜೀವಿಗಳ ಅನ್ವೇಷಣೆಯಲ್ಲಿ ಅವರು ತೊಡಗಿದರು. 'ಒಂದು ದೊಡ್ಡ ಅಲೆ ಬಂದು ಅಪ್ಪಳಿಸಿದರೆ ಇವುಗಳ ಗತಿ ಏನು ?' ಎಂದು ಅವಳು ಚಿಂತಿಸಿದಳು. ಅವನು ಬರಿದೆ ನಕ್ಕ. ಆತ ಒಂದನ್ನು ಹಿಡಿಯಲು ಹೋದ. ಅವಳು ಹೆದರಿ ಹಿಂದೆ ಸರಿದಳು. ಏಡಿಗಳು ಮಾತ್ರ ಯಾರ ಕೈಗೂ ಸಿಗದಂತೆ ಪುಳುಕ್ಕನೆ ಜಾರುತ್ತಿದ್ದವು. ಮರಳು ಹಸಿಹಸಿಯಾಗಿತ್ತು.

ಅವಳು ಏಡಿಯನ್ನು ತುಳಿದವಳಂತೆ ಮೆಟ್ಟಿಬಿದ್ದು ಹಿಂದಕ್ಕೆ ಸರಿದು ಇವನನ್ನು ಅಪ್ಪಿಕೊಂಡಳು. 'ಥೂ ! ಹೇಡಿ' ಎಂದು ನಕ್ಕ ಇವನು, ಅವಳು ಇವನನ್ನು ಇನ್ನಷ್ಟು ಬಿಗಿಯಾಗಿ ಹಿಡಿದುಕೊಂಡು ನಕ್ಕಳು. ಇವನೂ ನಕ್ಕ.

ಇಬ್ಬರ ನಗುವೂ ಪ್ರತಿಧ್ವನಿಸಿದಂತೆ ಬೆನ್ನ ಹಿಂದಿನಿಂದ ಯಾರೋ ನಕ್ಕರು. ಇಬ್ಬರೂ ಬೆಚ್ಚಿ, ಅಪ್ಪುಗೆ ಸಡಿಲಿಸಿ, ಹಿಂದಿರುಗಿ ನೋಡಿದರು. ಐದಾರು ಜನರ ಪುಟ್ಟು ಗುಂಪು. ಪಡ್ಡೆ ಹುಡುಗರು ಚಿಗುರು ಮೀಸೆಯ ಮುಖಗಳು. ಒಬ್ಬ ತಲೆಗೆ ಕೆಂಪುವಸ್ತ್ರ ಬಿಗಿದಿದ್ದ. ಇನ್ನೊಬ್ಬ ಮಲೆಯಾಳಿಯ ಲಬ್ಬೆ ಪಂಚೆ ಸುತ್ತಿದ್ದ. ಮತ್ತೊಬ್ಬನ ನೀಲಿ ಶರಟು ಗುಂಡಿಗಳಿಲ್ಲದೆ ಎದೆಯನ್ನು ತೋರಿಸುತ್ತಿತ್ತು. ಎಲ್ಲರ ಹರಿತ ಕಣ್ಣುಗಳೂ ಇವರ ಮೇಲೆಯೇ. ಸಂಕೋಚದಿಂದ, ನಾಚಿಕೆಯಿಂದ, ಗಲಿಬಿಲಿಯಿಂದ ಏನು ಮಾಡಲು ತೋಚದ ಇವರು ಹಾಗೆಯೇ ಗೊಂಬೆಗಳಂತೆ ತಟಸ್ಥರಾದಾಗ, ಪಡ್ಡೆ ಗುಂಪಿನ ನಗು ಮತ್ತೆ ಅಪ್ಪಳಿಸಿತು. ಇಬ್ಬರೂ ಎಚ್ಚರಗೊಂಡಂತೆ ಧೈರ್ಯದಿಂದ ಎಲ್ಲ

ವನ್ನು ಎದುರಿಸಲು ನಿರ್ಧರಿಸಿದವರಂತೆ ಥಟ್ಟನೆ ಅಪ್ಪುಗೆ ಬಿಡಿಸಿಕೊಂಡು, ಆ ಗುಂಪಿಗೆ ಬೆನ್ನು ಮಾಡಿ, ಗುಂಪನ್ನು ನಿರ್ಲಕ್ಷಿಸಿದವರಂತೆ ನಡೆಯತೊಡಗಿದರು. ಆತನ ಕೈ ಅವಳ ಕೈಯನ್ನು ಹಿಡಿದಿತ್ತು. ಅಚಾನಕವಾಗಿ ಹುಟ್ಟಿಕೊಂಡು ಹೊಸದೊಂದು ಸನ್ನಿವೇಶದಲ್ಲಿ, ಅನುಹ್ಯಾ ಭಯದಲ್ಲಿ, ಸ್ಪರ್ಶವೇ ಭರವಸೆ ಎನಿಸಿ, ಇಬ್ಬರೂ ಇನ್ನಷ್ಟು ಗಟ್ಟಿಯಾಗಿ ಕೈಗಳನ್ನು ಬೆಸೆದು ನಡೆದರು. ಹಸಿ ಮರಳ ಮೇಲೆ ದೃಢವಾಗಿ ಹೆಜ್ಜೆ ಊರುತ್ತ.

ಇಬ್ಬರ ಮನಸ್ಸುಗಳಲ್ಲೂ ಗುಂಪೇ ತುಂಬಿತ್ತು. ಇಬ್ಬರ ಗಮನವೂ ಗುಂಪಿನ ನಗೆ, ಕುಹಕ, ಮಾತುಗಳ ಕಡೆಗೇ. ಭಾಷೆ ಅರ್ಥವಾಗಲಿಲ್ಲ. ತುಳುವೋ ? ಮಲೆಯಾಳಿಯೋ ? ನೋಡಲು ಮಲೆಯಾಳಿಗಳ ಥರವೇ ಇದ್ದಾರೆ. ಮಲೆಯಾಳಿಗಳೇ ಇರಬೇಕು. ನಗೆ ಕುಹಕಳಂತೂ ಇರಿಯುತ್ತಿದ್ದವು. ಮಾತು ಮರೆತವರಂತೆ, ನಗೆ ಅರಿಯದವರಂತೆ, ಮರಳಿನ ಮೇಲೆ ನಡೆಯುವ ಶಿಕ್ಷೆಗೆ ಗುರಿಯಾದವರಂತೆ ಇವರು ನಡೆಯುತ್ತಲೇ ಇದ್ದರು. ಗುಂಪು ಹಿಂಬಾಲಿಸಿಯೇ ಇತ್ತು. ಆತ ಒಮ್ಮೆ ತಿರುಗಿ, ನೋಡಿಯೂ ನೋಡದಂತೆ, ಗುಂಪನ್ನು ಗಮನಿಸಿದ. ಅದು ಇನ್ನಷ್ಟು ಹತ್ತಿರವಾಗಿತ್ತು. ಸಿಗರೇಟಿನ ಹೊಗೆಯೂ ಗುಂಪಿನಿಂದ ಏಳುತ್ತಿತ್ತು. ಆಕೆಯೂ ಸೂಕ್ಷ್ಮವಾಗಿ ಗಮನಿಸಿದಳು, ಇವರು ನಡಿಗೆಯನ್ನು ಚುರುಕುಗೊಳಿಸಿದರು, ಗುಂಪಿನ ನಡಿಗೆಯ ವೇಗವೂ ಹೆಚ್ಚಾಯಿತು. ಇವರು ಥಟ್ಟನೆ ತಿರುಗಿ ಸಮುದ್ರಾಭಿಮುಖವಾಗಿ ನಡೆಯಲಾರಂಬಿಸಿದರು. ಗುಂಪೂ ಸಮುದ್ರದ ಕಡೆಗೆ ತಿರುಗಿತು. ಅದೇ ಸಮುದ್ರ ; ಅದೇ ನೀಲಿ ; ಅವೇ ದಡಕ್ಕಪ್ಪಳಿಸುವ ಅಲೆಗಳು ; ನೆತ್ತಿಯ ಮೇಲಿನ ಸೂರ್ಯ ಕೆಂಡ ಸುರಿಯುತ್ತಿದ್ದ ; ಸಮುದ್ರದ ಮೇಲಿಂದ ಬೀಸಿ ಬರುತ್ತಿದ್ದ ಗಾಳಿ ಬಿಸಿಯಾಗಿತ್ತು. ಸಮುದ್ರದ ಮೊರೆತ ಕಳಕಳವಾಗಿತ್ತು. ಹೆಬ್ಬಂಡೆಗಳಂತೆ, ಮದ್ದಾನೆಗಳಂತೆ, ಸೊಕ್ಕಿನಿಂದ, ಕ್ರೂರವಾಗಿ ಅಬ್ಬರಿಸಿ ಬರುವ ಅಲೆಗಳು ಇವರಿಗೆ ಎಲ್ಲವು ಅಸಹ್ಯವಾಗಿ, ಕ್ರೂರವಾಗಿ, ಭಯಾನಕವಾಗಿ, ಥಟ್ಟನೆ ಎಡಕ್ಕೆ ಹೊರಳಿ, ಬಂದ ದಾರಿಯನ್ನು ಹಿಡಿದು, ಸಮುದ್ರದ ಸಖ್ಯ ಕಳಚಿಕೊಂಡು ಬಿರಬಿರ ನಡೆದರು. ಕಳ್ಳನೋಟಗಳಲ್ಲಿ ಇಬ್ಬರೂ ಗುಂಪನ್ನು ಗಮನಿಸಿದರು. ಒಬ್ಬ ಪಡ್ಡೆ ಇನ್ನೊಬ್ಬನನ್ನು ಅಪ್ಪಿಹಿಡಿದಿದ್ದ. ಒಬ್ಬ ಕುಣಿಯುತ್ತಿದ್ದ ; ಇನ್ನೊಬ್ಬ ಹಾಡುತ್ತಿದ್ದ ; ಮತ್ತೊಬ್ಬ ಶಿಳ್ಳೆ ಹಾಕುತ್ತಿದ್ದ ; ಮಗದೊಬ್ಬ ಮರಳಿನ ಮೇಲೆ ಬಿದ್ದು ಪಲ್ಟಿ ಹೊಡೆದ. ಈ ಎಲ್ಲ ಕ್ರಿಯೆಗಳನ್ನು ನಡೆಸುತ್ತಲೇ ಗುಂಪು ಇವರನ್ನು ಬೆನ್ನಟ್ಟಿದಂತೆ ಕಾಣಿಸಿತು. ಇವರು ಇನ್ನಷ್ಟು ವೇಗದಲ್ಲಿ ನಡೆದರು. ಶಿಳ್ಳೆಗಳ ಜೊತೆಗೆ ಕೇಕೆಗಳೂ ಸೇರಿದವು. ಸೂರ್ಯ ಇನ್ನಷ್ಟು ಬೆಂಕಿ ಕಾರಿದಂತೆ, ಕಾದು ಬಿಸಿ ಏರಿದ ಮರಳಲ್ಲಿ ಪಾದಗಳು ಹೂತುಹೋಗುತ್ತಿರುವಂತೆ, ಉಕ್ಕುತ್ತಿದ್ದ ಬೆವರಿನಲ್ಲಿ ದೇಹವೇ ಕರಗಿಹೋಗುತ್ತಿರುವಂತೆ...............ರಾಶಿ ರಾಶಿ ಮರಳು. ತೀರದ ದೂರ. ರಪರಪ ಬಿಸಿಲು...............

ಕೆಂಧೂಳಿನ ಮಣ್ಣು ರಸ್ತೆಗೆ ಬಂದಾಗ ಇಬ್ಬರಿಗೂ ಧೈರ್ಯ ಬಂದಿತ್ತು. ನೆತ್ತಿಯ ಮೇಲೆ ಬೆಂಕಿ ಸುರಿಯುತ್ತಿದ್ದರೂ, ರಸ್ತೆಯಲ್ಲಿ ಮಾತ್ರ ಎಲ್ಲ ವ್ಯಾಪಾರವೂ ಮಾಮೂಲಾಗಿ ಸಾಗಿತ್ತು. ಮೀನಿನ ಕಟುವಾಸನೆ ಗಮ್ಮೆಂದು ಹೊಡೆಯುತ್ತಿತ್ತು. ಮಧ್ಯಾಹ್ನದ ಜೊಂಪು ನಿದ್ರೆಯನ್ನು ತೀರಿಸಿಕೊಳ್ಳುವಂತೆ ಅಲ್ಲೊಂದು ಬಸ್ಸು ನಿಂತಿತ್ತು. ಒಂದೆರಡು ಆಟೋಗಳು ಗಿರಾಕಿಗಳಿಗಾಗಿ ಕಾಯುತ್ತಿದ್ದವು. ಅಲ್ಲೊಂದು ಬೀಡಾ ಅಂಗಡಿ; ಇನ್ನೊಂದು ಕಡೆ ಬಾಳೆಗೊನೆಗಳೂ ಜೋತುಬಿದ್ದ ಡಬ್ಬ ಅಂಗಡಿ. ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಹೊರಟ ಗಜಿಬಿಜಿ ಜನ. ಇಬ್ಬರಿಗೂ ಪರಿಚಿತ ಜಾಗಕ್ಕೆ ಬಂದಂತೆನಿಸಿ ನಿರಾತಂಕವಾಗಿ ಉಸಿರಾಡಿದರು. ಆತ ಒಂದು ಕ್ಷಣ ನಿಂತು ಹಿಂದಿರುಗಿ ನೋಡಿದ. ಆಕೆಯೂ ನೋಡಿದಳು. ಗುಂಪು ಎಲ್ಲಿಯೂ ಕಂಡುಬರಲಿಲ್ಲ. ಇಬ್ಬರಿಗೂ ಸಮಾಧಾನವಾಯಿತು. 'ತುಂಬಾ ಹಸಿವು' ಎಂದಳಾಕೆ. 'ಹೌದು ನೋಡು, ಹೊಟ್ಟೆಯ ನೆನಪೇ ಆಗಿರಲಿಲ್ಲ' ಎಂದ ಆತ. ಇಬ್ಬರೂ ಹೋಟೆಲು ಹುಡುಕಿ ನಡೆದರು.

ಎಲ್ಲವನ್ನು ನೆನೆದು ಆತನಿಗೆ ನಗುವಂತಾಯಿತು. ನಾಲ್ಕಾರು ಪಡ್ಡೆ ಹುಡುಗರಿಗೆ ಎಷ್ಟೊಂದು ಆತಂಕಗೊಂಡೆವಲ್ಲ! ಒಬ್ಬೊಬ್ಬನನ್ನು ಚಚ್ಚಿ ಹಾಕಬಹುದಿತ್ತು ಎಂಬ ಐಡಿಯಾ ಬಂದು ಆತ ಮನಸ್ಸಿನೊಳಗೇ ಪೈಲ್ವಾನನಂತೆ ವಿವಿಧ ಭಂಗಿಗಳಲ್ಲಿ ತಾಲೀಮು ನಡೆಸತೊಡಗಿದ. ಛೇ! ಅವರಲ್ಲಿ ಒಬ್ಬನನ್ನು ಎದುರಿಸಲಾರೆ ಎಂಬ ಸತ್ಯ ಮನವರಿಕೆಯಾಗಿ ಆತ ನಿರಾಸೆಗೊಂಡ. ತೋಳಬಲವನ್ನೇ ನಂಬಿ ಕುಳಿತುಕೊಳ್ಳಲು ಇದೇನು ನವಾಬರ ಕಾಲವಾ? ನಾವು ಬದುಕುತ್ತಿರುವುದು ಯಾವ ಶತಮಾನದಲ್ಲಿ? ಯಾವ ದೇಶದಲ್ಲಿ? ಇಲ್ಲೇನು ಪ್ರಜಾಪ್ರಭುತ್ವ ಹಾಳಾಯಿತಾ? ಕಾನೂನು ವ್ಯವಸ್ಥೆ ಮುರಿದು ಬಿತ್ತಾ? ಪೋಲೀಸರು ಇರುವುದು ಯಾತಕ್ಕೆ? ಪೋಲೀಸರ ಚಿತ್ರ ಮನಸ್ಸಿನಲ್ಲಿ ಮೂಡಿದ್ದೇ ಆತ ಗಲಿಬಿಲಿಗೊಂಡ. ರಾಕ್ಷಸನಂತೆ ವಿಕಾರವಾಗಿ, ದರ್ಪದಿಂದ ಕುಳಿತ ಪೋಲೀಸ್ ಇನ್ಸ್‌ಪೆಕ್ಟರ್ ನನ್ನನ್ನು ಸಂಶಯದಿಂದ ನೋಡುತ್ತಾನೆ, ಇವಳನ್ನು ಜೊಲ್ಲು ಸುರಿಸುತ್ತ ನೋಡುತ್ತಾನೆ; ನಿಮ್ಮಿಬ್ಬರಿಗೂ ಏನು ಸಂಬಂಧ? ಎಂದು ಪ್ರಶ್ನಿಸುತ್ತಾನೆ. ಓಡಿ ಬಂದವರಾ? ಎಂದು ಕಣ್ಣು ಮಿಟುಕಿಸಿ ಕಿಲಾಡಿ ನಗೆ ನಗುತ್ತಾನೆ. 'ಓ, ಏನೋ ಬಡ್ಡಿಮಗನೇ, ಈ ಸುಂದರ ಹಕ್ಕಿಯನ್ನು ಹಾರಿಸಿಕೊಂಡು ಎಲ್ಲಿಗೆ ಹೊರಟೆ?'-ಎನ್ನುತ್ತಾನೆ. ಇಲ್ಲಾ ಸ್ವಾಮಿ, ನಾವು ಎಂ. ಎ. ವಿದ್ಯಾರ್ಥಿಗಳು. ನಿಮ್ಮೂರಿನ ಸಮುದ್ರ ನೋಡಲು ಬಂದೆವು. ಕರಾವಳಿಯ ಅಂಚು ನೋಡಲು ಬಂದೆವು. ನಾವು ಯಾರಿಗೂ ತೊಂದರೆ ಕೊಡಲು ಬಂದವರಲ್ಲ. ತೊಂದರೆ ಕೊಡುತ್ತಿರುವವರು ಇವರೇ, ಈ ಪಡ್ಡೆ ಪುಂಡರು' ಎಂದರೆ, ಅವನು ಗಹಗಹಿಸುತ್ತಾನೆ. ಅವಳನ್ನು ಸುಲಿದು ಸುಲಿದು, ಬೆತ್ತಲ್ಲಲ್ಲಿ ನಿಲ್ಲಿಸಿ, ಅಂಗಾಂಗ ಅಳೆದು ಅಬ್ಬರಿಸುತ್ತಾನೆ—'ಎಲ್ಲೋ ರಂಗಾ, ಇವನನ್ನು

ಲಾಕಪ್‌ಗೆ ಹಾಕಿ ನಾಲ್ಕು ತದುಕೋ, ನಿಜ ಬೊಗಳ್ತಾನೆ' ಎಂದು ಆಜೆ ಹಾಕಿಸಿ ಅವಳ ಹತ್ತಿರ ಹತ್ತಿರ ಸರಿದು ಹೋಗುತ್ತಾನೆ... .....

'ಥತ್' ಎಂದು ಉಗಿದ ಅವನು. ಅವಳು ಅಚ್ಚರಿಯಿಂದ 'ಏನಾಯ್ತು'? ಎನ್ನುವಂತೆ ನೋಡಿದಳು. ವಾಸ್ತವ ಪ್ರಪಂಚಕ್ಕೆ ಬಂದ ಅವನಿಗೆ ನಾಚಿಕೆಯಾಯ್ತು. 'ಏನಿಲ್ಲ, ಆ ಪಡ್ಡೆಗಳು ನೆನಪಾದ್ರು' ಎಂದ. 'ಥೂ! ಅವ್ರು ಹಾಳಾಗ್ಲಿ, ಮೊದ್ಲು ಊಟ ಮಾಡೋಣ. ಒಂದು ಹೋಟ್ಲು ಸಿಕ್ತಿಲ್ವಲ್ಲಾ ಇಲ್ಲಿ' ಎಂದಳು.

ಅವರು ಹುಡುಕಿ ಹುಡುಕಿ ಹೊಕ್ಕದ್ದು ಒಂದು ಪುಟ್ಟ ಕ್ಯಾಂಟೀನ್. ಒಳಗೆ ಕತ್ತಲು ಕವಿದಿದೆ ಎನಿಸಿತು. ಬಿಸಿಲಿನಿಂದ ಬಂದ ಇವರಿಗೆ ನಿಧಾನಕ್ಕೆ ಕಣ್ಣು ಹೊಂದಿಸಿ ಕೊಂಡು ನೋಡಿದರೆ, ಉದ್ದಕ್ಕೆ ಹಾಸಿದ ಬೆಂಚಿನ ಮೇಲೆ ಕುಳಿತು, ಮೇಜಿನಂತೆ ಇಟ್ಟಿದ್ದ ಇನ್ನೊಂದು ಉದ್ದನೆಯ ಹಲಗೆಯ ಮೇಲೆ ತಟ್ಟೆಗಳನ್ನಿಟ್ಟುಕೊಂಡು ಹಲವರು ಉಣ್ಣು ತ್ತಿದ್ದರು. ಚಡ್ಡಿಯ ಹುಡುಗರು ಬಡಿಸುತ್ತಿದ್ದರು. ಕೊಳಕಾದ ತುಂಡು ಪಂಚೆಯ ನ್ನುಟ್ಟುಕೊಂಡಾತ. ಆತ ಮಾಲೀಕ ಇರಬೇಕು, ಅತ್ತ ಇತ್ತ ಓಡಾಡುತ್ತ ಉಸ್ತುವಾರಿ ನೋಡುತ್ತಿದ್ದ. ಏನು ಮಾಡುವುದೆಂದು ತಿಳಿಯದೆ ಇವರು ನಿಂತಾಗ, ಹೊಗೆ ಬರು ತ್ತಿದ್ದ ಜಾಗದಿಂದ ಬಂದ ಕವುಟು ಸೀರೆಯ, ಕೆದರಿದ ಕೂದಲಿನ ಹೆಂಗಸೊಬ್ಬಳು, "ಒಳಗೆ ಬನ್ನಿ, ಜಾಗವುಂಟು" ಎಂದು ಮುಂದೆ ನಡೆದಳು. ಇಬ್ಬರೂ ಅವಳನ್ನು ಹಿಂಬಾಲಿ ಸಿದರು. ಅದೊಂದು ಪುಟ್ಟ ಕೋಣೆ. ಸೌತೆಕಾಯಿ, ಈರುಳ್ಳಿ, ಕೊಳೆತ ಮೆಣಸಿನಕಾಯಿ, ತೊಂಡೆಕಾಯಿ, ಕೋಸು, ಹಲಸಂಡೆ, ತೆಂಗಿನಕಾಯಿಗಳನ್ನು ಒಂದು ಮೂಲೆಯಲ್ಲಿ ಒಟ್ಟು ಹಾಕಲಾಗಿತ್ತು. ಇನ್ನೊಂದು ಬದಿಗೆ ಸಣ್ಣದೊಂದು ಕುಂಟುವ ಮೇಜು. ಮೂರು ಹಳೆಯ ಕುರ್ಚಿಗಳು. ಹೆಗಲ ಚೀಲಗಳನ್ನು ಒಂದು ಕುರ್ಚಿಗೆ ಹೊಂದಿಸಿ ಇವರು ಕೈತೊಳೆಯಬೇಕು ಎಂದರು. ಆ ಹೆಂಗಸು ಇವರನ್ನು ಹಿತ್ತಲಿಗೆ ಕರೆದೊಯ್ದಳು. ಅಲ್ಲೊಂದು ಮುದುಕಿ ಕೊಚ್ಚೆಯ ಮಧ್ಯೆ ಕುಳಿತು ಮೀನು ಹೆಚ್ಚುತ್ತಿತ್ತು. ರಾಶಿರಾಶಿ ಸತ್ತ ಮೀನು. ನಿರ್ಭಾವದಿಂದ ಕಚ್ಚಿ ಕಚ್ಚಿ ಹಾಕುತ್ತಿದ್ದ ಮುದುಕಿ. ಇರುಸು ಮುರುಸಿ ನಿಂದ ಅದನ್ನು ನೋಡುತ್ತಲೇ ಇವರು ತಂಬಿಕೆಯ ನೀರು ಸುರಿದುಕೊಂಡು, ಕೈ ಒದ್ದೆ ಮಾಡಿಕೊಂಡು ಉಣ್ಣುವ ಜಾಗಕ್ಕೆ ಬಂದರು.

ಮೇಜಿನ ಮೇಲೆ ಎರಡು ಊಟದ ಎಲೆಗಳು. ಬಿಸಿಬಿಸಿ ಕುಚ್ಚಲಕ್ಕಿಯ ಅನ್ನ. ಮೀನು ಸಾರು. ಎಲೆಯ ತುದಿಯಲ್ಲಿ ನಂಜಿಕೊಳ್ಳಲು ಕರಿದ ಮೀನು. ಆಕೆ ಅನ್ನ ಕಲೆಸಿಕೊಂಡು. ಒಂದು ತುತ್ತು ಬಾಯಿಗಿಟ್ಟುಕೊಂಡು, 'ಪರವಾಯಿಲ್ಲ' ಎಂದಳು. ಆತ ನಿಧಾನಕ್ಕೆ ಮೀನಿನ ಮುಳ್ಳು ಬಿಡಿಸುತ್ತ, ಬಾಯಿಗಿಟ್ಟುಕೊಂಡು, 'ಹೂಂ' ಎಂದರೆ ಬಾಗಿಲಲ್ಲಿ ಯಾರೋ ನುಗ್ಗಿದಂತೆ ಕತ್ತಲಾಗಿ ಇಬ್ಬರೂ, ಊಟ ನಿಲ್ಲಿಸಿ, ಕತ್ತೆತ್ತಿದ.

ಅದೇ ಗುಂಪು. ಅವೇ ಪಡ್ಡೆಗಳು. ಅದೇ ಅರ್ಥವಾಗದ ಭಾಷೆ. ಅವೇ ತಿನ್ನುವ ಕಣ್ಣುಗಳು. ಆಕೆ ಸೆರಗೆಳೆದುಕೊಂಡಳು. ಆತ ಮುಜುಗರದಿಂದ ಅನ್ನ-ಕಲೆಸುತ್ತಲೇ ದುರುಗುಟ್ಟಿದ. ಅದೇನೋ ಮಾತಾಡಿಕೊಂಡು, ಮುಸಮುಸ ನಕ್ಕು ಈ ಕೋಣೆಗೆ ಎದುರಾದ ಹೊರಗಿನ ಬೆಂಚಿನ ಕಡೆ ನಡೆದು, ಅಲ್ಲಿಯೇ ಕುಳಿತುಬಿಟ್ಟಿತು ಗುಂಪು. ಮೀನಿನ ಮುಳ್ಳು ಗಂಟಲಿಗೆ ಸಿಕ್ಕಿ ಈತ ದಡಬಡಿಸಿದ. ದಟ್ಟವಾದ ಗಬ್ಬುವಾಸನೆ ಮೂಗನ್ನು ತುಂಬಿದಂತೆ, ಎಲೆಯಲ್ಲಿನ ಕರಿದ ಮೀನಿಗೆ ಜೀವಬಂದು ಹರಿದಾಡಿದಂತೆ. ಬೆಂಕಿ ಉಗುಳುವ ಸೂರ್ಯ ಹೊಟ್ಟೆಯಲ್ಲಿ ಧುತ್ತನೆ ಹುಟ್ಟಿ ದಹಿಸುತ್ತಿರುವಂತೆ, ಉಮ್ಮಳಿಸಿ ಬಂದು ಆಕೆ ಎಲೆಯನ್ನು ಪಕ್ಕಕ್ಕೆ ತಳ್ಳಿ ಓಡಿದಳು. ಗಾಬರಿಯಿಂದ ಆತನೂ ಓಡಿದ.

ಬಂದರನ್ನು ಪ್ರವೇಶಿಸುವ ಹೆಬ್ಬಾಗಿಲಿನ ವಿನ್ಯಾಸ ವಿಚಿತ್ರವಾಗಿತ್ತು. ಅನೇಕ ಮೀನುಗಳ ಆಕೃತಿ ಸುತ್ತಲೂ ಇದ್ದು ಮಧ್ಯ ಭಾಗದಲ್ಲಿ ದೊಡ್ಡ ಮೀನೊಂದು ಆಕಾರ ಪಡೆದುಕೊಂಡಿತ್ತು. ಈ ಹೆಬ್ಬಾಗಿಲನ್ನು ದಾಟಿ ಒಳಗೆ ಹೋಗುವವರೆಲ್ಲ ದೂರಕ್ಕೆ ಮೀನಿನ ಹೊಟ್ಟೆಯನ್ನು ಹೊಕ್ಕಂತೆ ಕಂಡುಬರುತ್ತಿತ್ತು. ಇದನ್ನು ಆತನಿಗೆ ಅವಳು ವಿವರಿಸುತ್ತಿರುವಾಗಲೇ ಇಬ್ಬರು ಹೆಬ್ಬಾಗಿಲನ್ನು ದಾಟಿ ಬಂದರನ್ನು ಪ್ರವೇಶಿಸಿದರು.

ಕಾಲು ಹಾದಿಯಲ್ಲಿ ನಡೆದುಹೋದಂತೆ ಉದ್ದಕ್ಕೆ ಅಲ್ಲೊಂದು ಇಲ್ಲೊಂದು ಡೇರೆಗಳು. ಸುಡು ಸುಡು ಮರಳ ಕಾವಲಿಯ ಮೇಲೆ ಹರವಿದ ಒಣಗಿದ ಪುಟ್ಟ ಪುಟ್ಟ ಸೀಗಡಿ. ಎಂದೋ ಸತ್ತು, ಜೀವರಸ ಬತ್ತಿ, ಬೆಂಡಾದ ಲಡ್ಡು ಸೀಗಡಿ, ಇನ್ನೆಂಥವೋ ಜಾತಿಯವು ಮೀನುಗಳು. ಬಳಿಯುವ ಕೈಗಳು, ಒಂದರಮೇಲೊಂದರಂತೆ ಬುಟ್ಟಿಗಳನ್ನು ಏರಿಸಿಕೊಂಡು ಜೀವ ತುಳುಕಿಸುತ್ತ ನಡೆಯುವ ಹೆಣ್ಣುಗಳು; ಕುಲುಕುಲು ನಗೆಗಳು; ಮರಳಿಗೆ ಬಿದ್ದು ಪುಟಿಯುವ ತುಳು ಶಬ್ದಗಳು; ತುಂಡು ಬಟ್ಟೆಗಳು; ಧಿಮಿಗುಡುವ ಮೈಯಿಗಳು. ಇವರು ಒಂದು ಡೇರೆಯ ಸಮೀಪ ಹೋದರು. ದಟ್ಟ ಮೀನಿನ ವಾಸನೆ ಮೂಗಿಗೆ ಅಡರಿ ಆಕೆ ಇಸ್ಸೀ ಎಂದಳು. ಆತ ನಕ್ಕ. ಇವರಿಬ್ಬರನ್ನು ಕಣ್ಣರಳಿಸಿ ನೋಡಿದವು ಬೆಸ್ತ ಹೆಣ್ಣುಗಳು. ತುಂಬಿಕೊಂಡ ಮಾಂಸಲ ಮೈಯಲ್ಲಿ ನಾಚಿಕೆ ತುಳುಕಾಡಿದಂತೆ ಲಗುಬಗೆಯಿಂದ, ಸಂಕೋಚದಲ್ಲಿ ಹತ್ತಿರಬಾರದೆ, ದೂರವೂ ಹೋಗದೆ, ಸಂದಿಗ್ಧದಲ್ಲಿ ಸಿಕ್ಕಿಕೊಂಡ ಹೆಣ್ಣುಗಳು. ಇವರು ಇನ್ನಷ್ಟು ಹತ್ತಿರ ಹೋದರು. ಆ ಹೆಣ್ಣುಗಳ ಜೀವಂತಿಕೆ, ಲವಲವಿಕೆ, ಸಂಕೋಚ, ಉತ್ಸಾಹ ಎಲ್ಲವೂ ತಮಗೆ ಬಡಿಯುವಷ್ಟು ಹತ್ತಿರ ಹೋದರು. 'ಒಂದೆರಡು ಸ್ನ್ಯಾಪ್ಸ್ ತಕ್ಕೊಳ್ಳೋಣ?' ಎಂದ ಆತ. ಆಕೆ ಕ್ಯಾಮರಾ ರೆಡಿಮಾಡಿಕೊಂಡು, ಮೀನು ಹರವುತ್ತಿದ್ದ ಹೆಣ್ಣೊಂದಕ್ಕೆ ಫೋಕಸ್ ಮಾಡಿದಳು. ಆ ಹೆಣ್ಣು ಮೀನ ರಾಶಿಯ ಮೇಲೆ ಬಾಗಿ ಮೊಳ

ಕಾಲೂರಿ, ಇವಳನ್ನು ಮತ್ತು ಕ್ಯಾಮರಾವನ್ನು ಕಣ್ಣಗಲಿಸಿ ನೋಡುತ್ತಿರುವಾಗಲೇ ಕ್ಯಾಮರಾ 'ಕ್ಲಿಕ್' ಎಂದಿತು. ಈಕೆ ಇನ್ನಷ್ಟು ಹತ್ತಿರ ಸರಿದು, 'ಎಲ್ಲಿ ಹಾಗೇ ಇರು ಎಂದು ಕ್ಲೋಸಪ್‌ಗೆ ಸಿದ್ಧವಾಗುತ್ತಿದ್ದಂತೆ ಆ ಹೆಣ್ಣು ಸಿಗ್ಗಿನಿಂದ ಓಡಿತು. ಅವನು ಹೋ' ಎಂದು ನಕ್ಕ. ಅವಳು ಮತ್ತೊಂದು ಹೆಣ್ಣಿನತ್ತ ಕ್ಯಾಮರಾ ಹಿಡಿದು ನಡೆದಳು.

ಅವರು ಈಚೆ ಬಂದಾಗ ಆಕೆ 'ಅಯ್ಯೋ ಅಲ್ಲಿ ನೋಡು' ಎಂದು ತೋರು ಬೆರಳು ಹಿಡಿದಳು. ಆತ ನೋಡಿದ. ಮುಗಿಲ ತುಂಬ ಜೀವಜಾತ್ರೆ! ನೂರಾರು ಹದ್ದು-ಕಾಗೆಗಳು ರೆಕ್ಕೆ ಬಡಿಯುತ್ತ ನೆತ್ತಿಯ ಮೇಲೆ ಹಾರುವ ಕಾಗೆಗಳು ರೆಕ್ಕೆ ಹರವಿ ಕೊಂಡು ಹಗುರಾಗಿ ಎತ್ತರದಲ್ಲಿ ತೇಲುತ್ತ ಕೆಳಗೇ ದೃಷ್ಟಿ ಕೇಂದ್ರೀಕರಿಸಿದ ಹದ್ದುಗಳು. ಆಕಾಶವನ್ನು ಮುಚ್ಚಿ ಹಾಕಲು ಹೊರಟ ಪಕ್ಷಿ ಸಂಕುಲ.

ಅವರು ಅತ್ತ ನಡೆದರು. ಅದೇ ತಾನೆ ನಾವೆ ಬಂದಿತ್ತು. ಭಾರವಾದ ಅಲೆಯ ನ್ನೆತ್ತಿ ರಾಶಿರಾಶಿ ಮೀನುಗಳನ್ನು ಹಿಡಿದಿಡಿದು ಬುಟ್ಟಿಗೆ ತುಂಬುವವರು, ಬುಟ್ಟಿಯನ್ನು ಹೊತ್ತು, ನಾವೆ ಮತ್ತು ದಡದ ಮಧ್ಯೆ ಸಂಪರ್ಕ ಕಲ್ಪಿಸಲೆಂದು ಇಟ್ಟ ಹಲಗೆಯ ಮೇಲೆ ನಿಧಾನಕ್ಕೆ ಹೆಜ್ಜೆ ಇಡುತ್ತ, ಸಮತೋಲನ ಕಾಯ್ದುಕೊಳ್ಳುತ್ತ ನಡೆಯುವ ಹೆಣ್ಣುಗಳು ; ಮೀಸೆಯ ತುದಿಯಲ್ಲಿ ನಗುತ್ತಾ, ರಾಶಿ ತುಂಬುವಾಗ, ಬುಟ್ಟಿ ಹೊರಿಸು ವಾಗ ಹೆಣ್ಣುಗಳ ಮೈ-ಕೈಗಳಿಗೆ ತಮ್ಮ ಕೈಗಳನ್ನು ತಾಗಿಸುವ ಹುರುಪಿನ ಗಂಡಸರು, 'ಕಿಲಲ ಕೀ ಹಾ' ಎಂದು ಕರೆಯುವ ಯೌವನ ; ಮೈಯಲ್ಲಿ ಮುಸಮುಸ ಸೊಕ್ಕು ಉಕ್ಕಿಸುವ ಯೌವನ. ರಾಶಿ ರಾಶಿ ಮೀನು. ಬೆತ್ತಲು ಬೆತ್ತಲು ಮೈಯಿ. ಚೂಪು ಚೂಪು ಕೊಕ್ಕುಗಳು. ನೆಲ-ಮುಗಿಲುಗಳ ತುಂಬಾ ಜೀವಜಾತ್ರೆ.

ಬಿರುಸಿನ ಓಟ. ಯಾರೋ ಒಬ್ಬ ಗದರಿಕೊಳ್ಳುತ್ತಿದ್ದ 'ಬೇಗಬೇಗ' ಎನ್ನುತ್ತಿದ್ದ. 'ನಿಲ್ಲುವುದು ಬೇಡ' ಎನ್ನುತ್ತಿದ್ದ. ಕಾಲಿಗೆ ಗಾಲಿ ಕಟ್ಟಿಕೊಂಡಂತೆ ಹೆಣ್ಣುಗಳು ಬಿರಬಿರ ಸಾಗುತ್ತಿದ್ದವು. ಬುಟ್ಟಿ ಖಾಲಿಯಾಗುತ್ತಿದ್ದವು. ಬುಟ್ಟಿ ತುಂಬಿಕೊಳ್ಳುತ್ತಿದ್ದವು. ಬಲೆಯಲ್ಲಿ ವಿಲವಿಲ ಒದ್ದಾಡುತ್ತಿದ್ದ ಮೀನುಗಳು ದಡಕ್ಕೆ ಬಿದ್ದು ನಿರ್ಜೀವ ರಾಶಿ ಯಾಗುತ್ತಿದ್ದವು. ಮುಗಿಲಲ್ಲಿ ಗಸ್ತು ಇದಕ್ಕೆಲ್ಲ ಸಾಕ್ಷಿಯಾಗಿ ಸುತ್ತುತ್ತಲೇ ಇತ್ತು, ಆಚೆ ಇನ್ನೊಂದಿಷ್ಟು ಜನ ರಾಶಿಯನ್ನು ಹರಡುತ್ತಿದ್ದರು. ಏಡಿಗಳ ಕೊಂಡಿ ಮುರಿದು, ಮೀನಿನಿಂದ ಬೇರ್ಪಡಿಸುತ್ತ, ನೀರುಹಾವುಗಳನ್ನು ರಾಶಿಯಿಂದ ಎತ್ತಿ ಆಚೆ ಎಸೆಯುತ್ತಾ, ಒಮ್ಮೊಮ್ಮೆ ಗಡಿಬಿಡಿಯಲ್ಲಿ ಮೀನುಗಳನ್ನೇ ಆಚೆ ಎಸೆಯುತ್ತ ಲಗುಬಗೆಯಿಂದ ಮೀನು ಹರಡುತ್ತಿದ್ದ ಹೆಣ್ಣುಗಳು ; ಮೀನೋ, ಹಾವೋ ಆಚೆ ಬಿದ್ದದ್ದೇ ತಡ ರೊಯ್ಯನೆ ನೆಲಕ್ಕೆರಗಿ, ಕೊಕ್ಕು ನೆಟ್ಟು, ಕಾಲಮಧ್ಯೆ ಸಿಕ್ಕಿಸಿಕೊಂಡು, ಮುಗಿಲ ಸೇರುವ ಪಕ್ಷಿ ಸಂಕುಲ ನೆಲದ ಮೇಲೆ ಕಾದು ಕುಳಿತ ಇನ್ನಷ್ಟು ಹಕ್ಕಿಗಳು.

ಬಲೆಯಲ್ಲಿ ಮೀನು ಖಾಲಿಯಾಯ್ತು. ಬಲೆಯನ್ನು ಹೊತ್ತ ನಾವೆ ಮತ್ತೆ ಬೇಟೆಗೆ ಸಮುದ್ರ ಭೇದಿಸುತ್ತ ಹೊರಟಿತು. ದೂರ ದೂರ ಸಾಗಿದ ನಾವೆ ಅನಂತ ನೀಲಿಯಲ್ಲಿ ಲೀನವಾಗಿ ಚುಕ್ಕೆಯಾಯಿತು. ಉಸಿರೆಳೆದುಕೊಂಡ ಹೆಣ್ಣಾಳುಗಳು ಬುಟ್ಟಿಗಳನ್ನು ಬಗಲಲ್ಲಿರುಕಿಕೊಂಡು ಮೀನು ಹರವುತ್ತಿದ್ದ ಜಾಗಕ್ಕೆ ನಡೆದರು. ಗಂಡಾಳುಗಳು ಬೀಡಿಗೆ ಬೆಂಕಿ ತಾಗಿಸಿ, ಹೊಗೆಯುಗುಳತ್ತ ಪೋಲಿ ಮಾತುಗಳಲ್ಲಿ ನಗೆ ಎಬ್ಬಿಸಿದರು. ದಡದಲ್ಲಿ ಅಲ್ಲಲ್ಲಿ ಕುಳಿತು ಇದನ್ನೆಲ್ಲಾ ಮೋಜಿನ ಆಟದಂತೆ ನೋಡುತ್ತಿದ್ದವರು 'ಶೋ' ಮುಗಿಯಿತೆಂದು ಭಾವಿಸಿ ಚದುರಲಾರಂಭಿಸಿದರು.

"ಆ ಹದ್ದುಗಳು ನೋಡು, ಎಷ್ಟು ಕೆಳಗೆ ತೇಲುತ್ತಿವೆ, ರೆಕ್ಕೆಯನ್ನು ಬಡಿಯದೆ ಎಷ್ಟು ಹಗುರಾಗಿ ತೇಲುತ್ತಿವೆ"–ಎಂದ ಅವನು. ಅವಳು ನೋಡಿದಳು. ಹಗುರಾಗಿ ತೇಲುವುದು ಅವಳಿಗೂ ಇಷ್ಟವೇ. ಆದರೆ ಹದ್ದುಗಳು ತೀರ ಕೆಳಗಡೆ ಅಂದರೆ ಉದ್ದನೆಯ ಒಂದು ಗಳ ಹಿಡಿದರೆ ತಾಕುವಷ್ಟು ಕೆಳಗೆ ಹಾರುತ್ತಿದ್ದವು. ಅವುಗಳ ಕೊಕ್ಕು ಕಂಡು ಇವಳು ಬೆಚ್ಚಿದಳು. "ಥೂ! ಆ ಕೊಕ್ಕುಗಳನ್ನು ನೋಡಲಾಗುವುದಿಲ್ಲ" ಎಂದು ಕತ್ತು ಕೆಳಗೆ ಮಾಡಿದಳು. ಎಂಥದೋ ಭೀತಿ ಆವರಿಸಿ ಸಪ್ಪಗಾದಳು. "ಹಾಗಾದರೆ ಆ ಮೀನುಗಳನ್ನು ನೋಡು, ಅವುಗಳ ಮಿರಮಿರ ಮೈಯಿ ನೋಡು, ಬಿಸಿಲಿಗೆ ಹೇಗೆ ಫಳಗುಟ್ಟುತ್ತಿವೆ" ಎಂದ. ಆಕೆ ನೋಡಿದಳು ಕೆಲವಾರು ಒದ್ದಾಡುತ್ತಿದ್ದವು. ಹಲವು ಆಗಲೇ ಪ್ರಾಣ ಕಳೆದುಕೊಂಡು ನಿಶ್ಚೇಷ್ಟಿತವಾಗಿ ಬಿದ್ದಿದ್ದವು. ಇನ್ನು ಕೆಲವು ಮೀನುಗಳು ಮೈಯಿ ಉಬ್ಬಿ–ತಗ್ಗಿ ಉಸಿರಾಡುವುದನ್ನು ಸೂಚಿಸುತ್ತಿತ್ತು. ಅದೊಂದು ಸಾಯೋ ಆಟ! "ಪಾಪ" ಎಂದಳು, ಅವಳಲ್ಲಿ ಮರುಕ ತುಂಬಿತ್ತು. "ಮೀನುಗಳು ಸಮುದ್ರದಲ್ಲಿದ್ದರೆ ಚೆಂದ" ಎಂದಳು. "ಅವು ಈಜುವುದು, ಜಿಗಿಯುವುದು, ತಳಕ್ಕಿಳಿಯುವುದು, ಮೇಲೇರಿ ಬರುವುದು, ಉಸಿರಾಡಿ ನೀರಲ್ಲಿ ಗುಳ್ಳೆ ಏಳಿಸುವುದು ಎಲ್ಲಾ ಎಷ್ಟು ಚೆನ್ನಾಗಿ ಇರುತ್ತೆ," ಎಂದಳು. "ಅವು ಪ್ರೀತಿಸುವುದು?" ಈತನ ಪ್ರಶ್ನೆಗೆ ಆಕೆ ಕೊಂಕಿದಳು—"ನೀನೇ ಹೇಳು ಅದಕ್ಕೆ ಉತ್ತರಾನ". ಇಬ್ಬರೂ ಬಿಸಿಲನ್ನು ಮರೆತು ಒಂದಿಷ್ಟು ಹೊತ್ತು ನಡೆದರು.

ಮೀನುಗಳು ಸಾಯುತ್ತಿದ್ದವು. ಹದ್ದುಗಳು ಬೇಟೆಯಾಡುತ್ತ ಗಸ್ತು ತಿರುಗುತ್ತಿದ್ದವು. ಕಾಗೆಗಳು ಠಳಾಯಿಸುತ್ತ, "ಕ್ರಾ, ಕ್ರಾ" ಎನ್ನುತ್ತಿದ್ದವು. ಬಿಸಿಲು ಅಷ್ಟೇ ಪ್ರಖರವಾಗಿ ಉರಿಯುತ್ತಿತ್ತು. ಕಟುವಾಸನೆ ಇನ್ನಷ್ಟು ದಟ್ಟವಾಗುತ್ತಿತ್ತು. ಕೈಗಳು ಅಷ್ಟೇ ಚುರುಕಿನಿಂದ ರಾಶಿಯನ್ನು ಕೆದುಕುತ್ತಿದ್ದವು.

ಇಬ್ಬರಿಗೂ ಅಲ್ಲಿ ನಿಲ್ಲುವುದು ಕಷ್ಟವಾಯಿತು. "ಸಮುದ್ರ ನೋಡುಣವಾ, ಆಚೆ ಹೋಗಿ" ಎಂದ ಅವನು. "ಬೋಟಿಂಗ್ ಹೋಗೋಣ" ಎಂದಳಾಕೆ. ಜನಗಳ

ಮಧ್ಯೆ ತೂರಿಕೊಂಡು ಹೊರಟರು. ಎದುರಿನಿಂದ ಬಂದವನೊಬ್ಬ ಅವಳ ಭುಜಕ್ಕೆ ಬಲವಾಗಿ ಢಿಕ್ಕಿ ಕೊಟ್ಟ. ಭುಜ ರುಮುರುಮು ಎಂದಿತು. ಅವಳು ನೋಡಿದಳು. ಅವನೇ ಅದೇ ಪಡ್ಡೆ ಗುಂಪಿನ ಲಬ್ಬೆ ಪಂಚೆಯುವನು. ಮೈ ಉರಿಯುವ ಕೋಪದಲ್ಲಿ ಇವಳು ನೋಡಿದ್ದೇ ಅವನು ಕ್ಷಣಾರ್ಧದಲ್ಲಿ ಮರೆಯಾದ.

* * *

"ಬೋಟ್ ತುಂಬಲು ಹನ್ನೆರಡು ಜನ ಬೇಕು. ಸ್ವಲ್ಪ ಹೊತ್ತು ಕಾಯಿರಿ, ಇಲ್ಲವಾದರೆ ಹನ್ನೆರಡು ಸೀಟುಗಳ ಹಣ ಕೊಡಿ. ಈಗಲೇ ಹೊರಡೋಣ" ಎಂದ ಚಾಲಕ. ಅಷ್ಟೊಂದು ಹಣ ಕೊಡುವುದು ಇಬ್ಬರಿಗೂ ಬೇಡವಾಗಿತ್ತು. ಯೋಚಿಸುತ್ತ ನಿಂತರು. ಚಾಲಕ ಅರ್ಥಮಾಡಿಕೊಂಡವನಂತೆ, "ಇನ್ನೇನು, ಸ್ವಲ್ಪ ಹೊತ್ತಿರಿ. ಯಾರಾದರೂ ಬರುತ್ತಾರೆ" ಎಂದ. ಇಬ್ಬರೂ ಕಾಯತೊಡಗಿದರು. ಅಲೆಗಳು ತೇಲಿ ಬರುವುದನ್ನು ನೋಡಿದರು. ಅಲ್ಲೊಂದು ಇಲ್ಲೊಂದು ತೇಲುತ್ತಿದ್ದ ನಾವೆಗಳನ್ನು ನೋಡಿದರು. ಸಮುದ್ರದ ನೀಲಿಯನ್ನು ನೋಡಿದರು. ಎಲ್ಲಿಯೋ ಆಳದಲ್ಲಿರಬಹುದಾದ ಮೀನುಗಳನ್ನು, ಅವುಗಳ ಜೀವಂತಿಕೆಯನ್ನು, ಜಾರುವ ನುಣುಪು ಮೈಯಿಗಳನ್ನು ನೆನೆದು ಅವಳು ಪುಳಕಗೊಂಡಳು.

ಕಾದು ಸುಸ್ತಾದ ಇಬ್ಬರಿಗೂ, ಯಾರಾದರೂ ಬರಬಾರದೇ ಎನಿಸಿತು. ಒಬ್ಬ ಇತ್ತ ಸುಳಿದರೂ, ಆನಂದದಿಂದ ಸ್ವಾಗತಿಸಲು ಮುಂದಾಗುತ್ತಿದ್ದರು. ಬಂದವರು ಇತ್ತ ಕಣ್ಣೂ ಹೊರಳಿಸದೆ ಮುಂದೆ ಹೋದಾಗ ನಿರಾಶರಾಗಿ ಸಮುದ್ರ ನೋಡುತ್ತಿದ್ದರು. ಮರುಕ್ಷಣದಲ್ಲಿ ಮತ್ತೆ ಹೊಸ ಆಸೆ ಚಿಗುರೊಡೆದು, ಮತ್ತೆ ಕಣ್ಣು ಹೊರಳಿಸಿ ಯಾರಾದರೂ ಬಂದೇ ಬರುತ್ತಾರೆ ಎಂಬ ಭರವಸೆಯಿಂದ ನೋಡುತ್ತಿದ್ದರು.

ದೂರದಲ್ಲೊಂದು ಗುಂಪು ಮರಳ ರಾಶಿಯಿಂದ ಎದ್ದು ಬರುತ್ತಿರುವಂತೆ, ಇತ್ತಲೇ ಬರುತ್ತಿದ್ದಾಗ ಇವರು ಪುಳಕಗೊಂಡರು. ಆಗಂತುಕರಿಗೆ ಹಾರ್ದಿಕ ಸ್ವಾಗತ ಬಯಸಲು ಅಣಿಯಾದವರಂತೆ, ನಿಂತಲ್ಲೇ ಚಡಪಡಿಸಿದರು. ಗುಂಪು ಹತ್ತಿರವಾಗುತ್ತಿತ್ತು. ಇಬ್ಬರೂ ಕಣ್ಣು ನೆಟ್ಟರು. ಉಸಿರಾಟವನ್ನು ನಿಯಂತ್ರಿಸಿ ಸಿದ್ಧಗೊಂಡಂತೆ ಎವೆಯಿಕ್ಕದೆ ನೋಡಿದರು. ಗುಂಪಿನಲ್ಲಿದ್ದ ವ್ಯಕ್ತಿಗಳು ನಿಧಾನಕ್ಕೆ ಆಕಾರ ಪಡೆದುಕೊಂಡಂತೆ ಇಬ್ಬರ ಮುಖಗಳೂ ಕಳೆಗುಂದಿದವು. ಹೃದಯಗಳ ಬಡಿತ ಜೋರಾಯಿತು. ಬಿಸಿಲು ರಪರಪ ಮುಖಕ್ಕೆ ರಾಚಿದಂತೆ, ಕಟುವಾಸನೆ ಉಸಿರುಕಟ್ಟಿದಂತೆ, ಮೀನುಗಳು ವಿಲಿವಿಲಿ ಒದ್ದಾಡುತ್ತ ಸತ್ತುಬಿದ್ದಂತೆ....

"ಬೇಡ, ಬೋಟಿಂಗ್ ಬೇಡ, ಎಂಥದು ಬೇಡ. ಬೇಗ ಇಲ್ಲಿಂದ ಹೊರಟು ಬಿಡೋಣ" ಎಂದು ಆಕೆ ಹೆಜ್ಜೆ ಹಾಕಿದಳು. ಆತನೂ ಹೊರಟ. ಹಿಂದಿನಿಂದ ಚಾಲಕ ಕೂಗುತ್ತಿದ್ದ, "ಬಂದೇ ಬಿಟ್ರಿ, ಬನ್ನಿ ಬನ್ನಿ ಇಷ್ಟು ಹೊತ್ತು ಕಾದು ಈಗ ಹೋಗುವುದು ಎಂಥದು ಮಾರಾಯರೆ. ಬನ್ನಿ ಬನ್ನಿ......

* * *

ಓಡಿ ಓಡಿ ಬಂದರು. ಬಸ್ಸು ಸಿಕ್ಕಿತು. ಗಿಜಿಗಿಜಿ ಜನ. ಕಾಲಿಡಲ್ಲು ಜಾಗವಿಲ್ಲ. ಅದರಲ್ಲೇ ತೂರಿಕೊಂಡರು. ಗುಂಪಿನಲ್ಲಿ ಕಳೆದುಹೋಗುವ ಭಯದಿಂದ ಪರಸ್ಪರ ಹತ್ತಿರವಾದರು. ಓಡಿ ಬಂದದ್ದಕ್ಕೆ ಉಸಿರು ತಿದಿಯೊತ್ತುತ್ತಿತ್ತು. ಉಸಿರಾಡಲೂ ಗಾಳಿ ಇಲ್ಲದಷ್ಟು ಸೆಖೆ. ಧಳ ಧಳ ಇಳಿಯುವ ಬೆವರು. ಬೆವರಿನ ವಾಸನೆ ಮೂಗಿಗೆ ಅಡರುತ್ತಿತ್ತು. ಬಸ್ಸನ್ನು ಡಬಡಬ ಬಡಿದು ಕಂಡಕ್ಟರ್ ರೈಟ್ ಕೊಟ್ಟ. ಮೊದಲ ಗೇರಿನಲ್ಲಿ ಬಸ್ಸು ಒಂದಿಷ್ಟು ದೂರ ಹೋದ ಕೂಡಲೇ ಕಂಡಕ್ಟರ್ ವಿಷಲ್ ಹಾಕಿದ. ಬಸ್ಸು ನಿಂತಿತು, ಮತ್ಯಾರೋ ತುಂಬಿಕೊಂಡರು. ಮುಂದೆ ಹೋಗಿ, ಮುಂದೆ ಹೋಗಿ ಎಂದು ಕಂಡಕ್ಟರ್ ಕೂಗಿದ. ಹಿಂದಿದ್ದವರು ಮುಂದಿನವರ ಮೇಲೆ ಬಿದ್ದರು. ಮುಂದಿನವರು ಅವರ ಮುಂದಿನವರ ಮೇಲೆ ನೂಕಾಟ ನಡೆದಿದ್ದಂತೆ ಕಂಡಕ್ಟರ್ ಮತ್ತೆ ರೈಟ್ ಕೊಟ್ಟ. ಬಸ್ಸು ಒಂದು. ಎರಡು, ಮೂರು ಗೇರುಗಳನ್ನು ದಾಟಿ ಟಾಪಿಗೆ ಹೋಯಿತು. ಒಳಗಿದ್ದವರೆಲ್ಲಾ ಗಾಳಿ ಸಂಚಾರವಾಗಿ ಒಂದಿಷ್ಟು ದೇಹ ಮನಸು ಹಗುರು ಮಾಡಿಕೊಂಡರು. ಇಂತವರಿಗೆ ಮಾತ್ರ ಬ್ಯಾಲೆನ್ಸ್ ಹಿಡಿಯುವುದು ಕಷ್ಟವಾಗಿ ಒಬ್ಬರ ಮೇಲೊಬ್ಬರು ಬೀಳುವುದು, ನೂಕುವುದು, ಕಾಲು ತುಳಿಯುವುದು ಇತ್ಯಾದಿ ನಡೆದೇ ಇದ್ದವು.

ಕಿರ್...ರ್‍್ರ...ರ್‍್ರ.....ಗಾಡಿ ನೋವಿನಿಂದ ಚೀರಿ ವೇಗವನ್ನು ಪೂರಾ ತಗ್ಗಿಸಿ, ಥಟ್ಟನೆ ಬಲಕ್ಕೆ ಹೊರಳಿ ಓಡಿತು. ಯಾರು ಯಾರ ಮೇಲೋ ಬಿದ್ದರು. ಮತ್ತಾರೋ ಚೀರಿದರು. ಇನ್ನಾರದೋ ಹಣೆಗೆ ಕಂಬಿ ಬಡಿಯಿತು. ಮಗುವಿನ ಮೇಲೆ ಮುದುಕಿಯೊಂದು ಬಿದ್ದು ಮಗು ಚೀರಿತು. ಮತ್ತೆಲ್ಲಿಯೋ ನಾಲ್ಕಾರು ಮಕ್ಕಳು ರಟ್ಟೆ ಹಿಡಿದು ಅಳುತ್ತಿದ್ದವು. ಫುಟ್‌ಬೋರ್ಡಿನ ಬಳಿ ಹತ್ತಾರು ಕಂಠಗಳು ಒಕ್ಕೊರಲಿನಿಂದ "ನಿಲ್ಸಿ, ನಿಲ್ಸಿ" "ಹೋಲ್ಡಾನ್" ಎಂದೊರಲಿದವು. ಯಾರೋ ಬಸ್ಸನ್ನು ಡಬಡಬ ಬಡಿದರು. ಕಂಡಕ್ಟರ್ ವಿಷಲ್ ಊದಿದ. "ಯಾರೋ ಬಿದ್ರು. ಬಿದ್ರು" ಎಂದು ಚೀರಿದರು. ವೇಗ ಹೆಚ್ಚಿಸಿಕೊಳ್ಳುತ್ತಿದ್ದ ಬಸ್ಸು ಮತ್ತೆ ಕಿರ್‍ರ್‍್ರ ಸದ್ದಿನೊಂದಿಗೆ ಥಟ್ಟನೆ ನಿಂತಿತು.

ಫುಟ್‌ಬೋರ್ಡಿನಲ್ಲಿದ್ದವರೆಲ್ಲಾ ಧಡ ಧಡ ಇಳಿದರು. ಮುಂದುಗಡೆಯಿಂದ ಈಗ ಹಿಂದಕ್ಕೆ ನುಗ್ಗಾಟ ಆರಂಭವಾಯಿತು. ಬಸ್ಸಿನ ಬಾಗಿಲು ಕಿತ್ತುಹೋಗುವಷ್ಟು

ರಭಸದಲ್ಲಿ ಜನ ಪುತುಪುತು ಉದುರಿದರು. ನುಗ್ಗಾಟದಲ್ಲಿ ಸಿಕ್ಕಿ ಅವನು ಬಾಗಿಲವರೆಗೆ ತಳ್ಳಲ್ಪಟ್ಟು, ಅದೇ ರಭಸದಲ್ಲಿ ಕೆಳಕ್ಕೂ ಬಂದು ನೆಲ ಮುಟ್ಟಿ ಸುದೀರ್ಘವಾಗಿ ಉಸಿರುಬಿಟ್ಟ, ಗುಂಪಿನಿಂದ ಆಚೆ ಸರಿದು, ಅವಳಿಗಾಗಿ ಹುಡುಕಿದ. ಅವಳ ಕೈಕಾಲು ಒಂದು ಕಡೆ, ಸೀರೆಯ ಸೆರಗು ಒಂದು ಕಡೆ, ಹೆಗಲ ಚೀಲ ಮತ್ತೊಂದು ಕಡೆಯಾಗಿದ್ದು; ಅವನ್ನೆಲ್ಲಾ ಒಂದೆಡೆ ತರಲು ಹೆಣಗುತ್ತಾ ಬಾಗಿಲ ಕಡೆ ಬರುತ್ತಿದ್ದ ಅವಳು ಕೊನೆಗೂ ಬಾಗಿಲಿನಿಂದ ಹೊರಕ್ಕೆಸೆಯಲ್ಪಟ್ಟು ನೆಲಮುಟ್ಟಿದಳು. ಸೆರಗು ಸರಿಪಡಿಸಿಕೊಂಡು ಹರಡಿದ್ದ ಕೂದಲನ್ನು ಕೈಯಲ್ಲಿ ಒಪ್ಪಮಾಡಿಕೊಳ್ಳುತ್ತಿದ್ದ ಅವಳನ್ನು ಅವನು ಬಂದು ಸೇರಿಕೊಂಡ. ಇಬ್ಬರೂ ಜಂಗುಳಿಯಿಂದ ಆಚೆ ಸರಿದರು.

"ಅಯ್ಯೋ"

"ಛೇ ! ನೋಡುವುದಕ್ಕಾಗುವುದಿಲ್ಲ ಮಾರಾಯಾ"

"ಪಾಪ"

"ಎಂಥ ಅನ್ಯಾಯ, ಎಂಥ ಅನ್ಯಾಯ"

"ಇಷ್ಟು ಸ್ಪೀಡಲ್ಲಿ ಗಾಡಿ ಹೊಡೆದರೆ ಮತ್ತೇನಾಗುತ್ತೆ"

"ಸ್ಪೀಡಿಗೂ ಒಂದು ಲಿಮಿಟ್ ಬೇಡ್ವಾ ?"

"ಏನಂತೆ ? ಏನಂತೆ ?"

"ಯಾರಂತೆ ಬಿದ್ದವರು ?"

"ಇನ್ನೂ ಜೀವ ಇದೆಯಾ ?"

"ಒಂದು ಸ್ಪಾಟ್ ಡೆತ್ತಂತೆ."

ಇಡೀ ಮಂದೆಯೇ ಸ್ಥಳಕ್ಕೆ ಧಾವಿಸುತ್ತಿತ್ತು. ರಸ್ತೆ ಗಿಜಿಗುಟ್ಟುತ್ತಿತ್ತು. ಇವರು ಒಬ್ಬರ ಕೈ ಒಬ್ಬರು ಹಿಡಿದು ಕುತೂಹಲದಿಂದ, ಕಳವಳದಿಂದ ಓಡಿದರು.

ಬಸ್ಸಿನಿಂದ ಒಂದಿಷ್ಟು ದೂರದಲ್ಲಿ, ಹಿಂದೆ, ಲಾರಿಯೊಂದು ನಿಂತಿದೆ. ಅಲ್ಲಿ ಹತ್ತಿರ ಸುಳಿಯಲೂ ಆಗದಷ್ಟು ಜನಜಂಗುಳಿ ತಳ್ಳುತ್ತಾ, ಸರಿಯುತ್ತಾ, ನುಗ್ಗುತ್ತಾ ಇವರು ಇಷ್ಟಿಷ್ಟೇ ನುಸುಳಿ ಕೊನೆಗೆ ಮುಂಚೂಣಿ ತಲುಪಿದರು. ಲಾರಿಯ ಮುಂದಿನ ಗಾಲಿಗೆ ಸಿಕ್ಕು ದೇಹವೊಂದು ಅಪ್ಪಚ್ಚಿಯಾಗಿದೆ. ಕಳ್ಳು ಪಚ್ಚು ಹೊರಬಂದಿವೆ. ರಕ್ತ ಚೆಲ್ಲಾಡಿ, ಇಡೀ ಟಾರು ರಸ್ತೆಯೇ ಕೆಂಪಾಗಿ ಹೋಗಿದೆ. ಅಷ್ಟು ದೂರದಲ್ಲಿ ಒಂದು ಬ್ಯಾಗು ಬಿದ್ದು ಅದರಲ್ಲಿನ ಸಾಮಾನುಗಳು ಚೆಲ್ಲಾಡಿವೆ. ಷರಟು ಚಿಂದಿಚಿಂದಿಯಾಗಿದೆ. ಈ ಕಡೆಗಿನ ರುಂಡದಲ್ಲಿ ನಾಲಗೆ ಕಚ್ಚಿಕೊಂಡಿದೆ. ಕಣ್ಣುಗಳು ಹಾಗೆಯೇ ತೆರೆದುಕೊಂಡಿವೆ.

ಥತ್ತರ ನಡುಗುತ್ತಿದ್ದ ಅವಳ ಕೈಯಲ್ಲಿ ತನ್ನ ಕೈಯನ್ನು ಅವನು ಬೆಸೆದ. ಇಬ್ಬರ ಎದೆಗಳೂ ಜೋರಾಗಿ ಬಡಿದುಕೊಳ್ಳುತ್ತಿದ್ದವು. ಇಬ್ಬರೂ ಎವೆಯಿಕ್ಕದೆ ನೋಡಿದರು:

ಲಾರಿಯ ಚಕ್ರಕ್ಕೆ ಅರ್ಧ ಸಿಕ್ಕಿ ಹರಿದುಹೋಗಿದ್ದ ಲಚ್ಚಿ ಪಂಚೆ ರಕ್ತದಲ್ಲಿ ತೋಯ್ದು ಹೋಗಿತ್ತು.

ಅವಳ ಕೈಯನ್ನು ಇನ್ನಷ್ಟು ಗಟ್ಟಿಯಾಗಿ ಅಮುಕಿ ಹಿಡಿದು ಅವಳತ್ತ ನೋಡಿದ. ಅವಳ ಎರಡೂ ಕಣ್ಣುಗಳಲ್ಲಿ ನೀರು ಧುಮುಕುತ್ತಿತ್ತು.

(1982–85)

## ಮೂಡು

ಮಾತು
ಬಿಟ್ಟ ಹೆಣ್ಣು ಮಕ್ಕಳ ಮನೆ ಮಾರು
ತೌರು ದಾರಿ ಸವೆಸಿ ಸಣ್ಣಗಾದ ಹೆಂಗರುಳು

ಗೊಬ್ಬರ ಗೋಡಿಗೆ ಬಂಡಿ ಹೂಡಿ
ಲಾಗಾಯ್ತು ತಲೆಗಂಟಿದ ಸಿಂಬೆತಟ್ಟಿ
ಬದಲಾದ ಹೆಸಸು ಗೊತ್ತಿರದ ಊರು ಕೇರಿ

ಸತತ ಹುಡುಕಾಟ
ಕಂಡಜನರ ನಡುವೆ ಉಂಡು
ಹೋದ ಸುದ್ದಿ

ಎತ್ತಿಕೊಂಡ ತಂಬಿಗೆಯೊಳಗೆಲ್ಲ
ಹಿಡಿಕಿಟ್ಟ ಹಸಿಯುವರೆ
ಆತಂಕದ ಕಣ್ಣಾಲಿಗಳ ತುಂಬಗೊನೆ
ತುಂಬಿದ ಅಂಬು ಅಡಿಕೆ ತೆಂಗು ಬಾಳೆ

ಎಡ ಬಲ ಹೊಲಮಾಳ ಹಬ್ಬಿ
ಹರಿದ ಸಾವಿರದ ಬಿಳಿಗೋರಿಗಳು

ಆಸೆ ಹಾಡಿನ ಕಣಗಿಲ ಅಲೆಯುಲೆ ಪಿಸು-

ಗುಟ್ಟಿವೆ ಅಲ್ಲಿ ಇಲ್ಲಿ!
ಕರಿಮಣಿ ಗುಳಿದಾಳಿಗುಂಡುಗಳು
ಎಲ್ಲಿ....ಎಲ್ಲಿ...ಎಲ್ಲಿ ?

—ಎಸ್. ಜಿ. ಸಿದ್ಧರಾಮಯ್ಯ

---

ಎಸ್. ಜಿ. ಸಿದ್ದರಾಮಯ್ಯ, ಕನ್ನಡ ಅಧ್ಯಾಪಕ, ಸರ್ಕಾರಿ ಕಲಾ ಕಾಲೇಜ್, ತುಮಕೂರು.

# ಪ್ರೀತಿ-ಸಾವು

ಗೆಳತಿ,

ಕೇಳಬೇಕೆಂದಿದ್ದ ಪ್ರಶ್ನೆ
ಗಂಟಲಲ್ಲೆ ನಿಂತುಹೋಯ್ತು
ಬಾನಿನ ಮೇಲೆ ಓಕುಳಿ ಆಡುವ
ನೂರೆಂಟು ಬಣ್ಣಗಳ ಮೋಡದಂತೆ
ನಿನ್ನ ಅವನ ಕಣ್ಣುಗಳಲಿ
ಪ್ರೀತಿ ಕೀಟ ನೇಯುತ್ತಿದ್ದ ರಂಗಿನ ಬಲೆಯು
ಕಣ್ಣಲ್ಲೆ ನಿಟ್ಟಿಸುತ್ತಾ
ಪುಳಕಗೊಂಡಿದ್ದೆ ಎಷ್ಟೊ ಬಾರಿ.

ನಿನ್ನ ಚಡಪಡಿಕೆ ಮುಚ್ಚಿಟ್ಟ ಬಯಕೆಗಳು
ಗಿಂಡಿಯ ತುಂಬಾ ಮುಚ್ಚಿಟ್ಟ ಮುತ್ತು ರತ್ನಗಳಂತೆ
ಕಣ್ಣು ಕೋರೈಸಿ ಕಚಗುಳಿ ಇಡುತ್ತಿದ್ದೊ.

ಈಗಷ್ಟೆ ಸರಿದು ಹೋದಂತಿರುವ
ನಾಲ್ಕೈದು ವರ್ಷಗಳಲಿ ಹೇಳ ಹೆಸರಿಲ್ಲದೆ
ಉಂಟಾದ ಏನೆಲ್ಲ ಬದಲಿಕೆಗಳು
ಬೇರೆ ಬೇರೆ ಪಥಗಳಲ್ಲಿ
ಬೇರೆ ಬೇರೆ ಸೂರಿನಡಿ
ಬದುಕುತ್ತಿದ್ದ ನಿನ್ನ ಅವನ ಬಾಳು
ಎಲ್ಲವನ್ನೂ ಮುಚ್ಚಿ ಹಾಕಿತ್ತು
ಕೆಂಡವ ಬೂದಿ ಮುಸುಕಿದಂತೆ.

ನೀನು ಅವನು ಸಿಕ್ಕಲ್ಲೆಲ್ಲ ಕೇಳಬೇಕೆಂದಿದ್ದ
ಆತ್ಮೀಯ ರಹಸ್ಯದ ಗುಟ್ಟುಗಳು ನೀರ ಮೇಲಿನ
ಸುಂದರ ಗುಳ್ಳೆಗಳಂತೆ ಪಟಪಟನೆ ಸಿಡಿದು ಹೋದವು
ಇದ್ದಕ್ಕಿದ್ದಂತೆ ಅವನ ಕಬಳಿಸಿದ ಕಪ್ಪು ಸಾವು
ಬರಸೆಳೆದು ಮುಚ್ಚಿತ್ತು ಆಗುಹೋಗುಗಳ ನುಂಗಿ.

—ಸುವರ್ಣ ಕಾಡನಕುಪ್ಪೆ

---

ಆರ್. ಸುವರ್ಣ ಕಾಡನಕುಪ್ಪೆ, 387, 14ನೇ ಮುಖ್ಯ ರಸ್ತೆ, ಸರಸ್ವತಿಪುರಂ
ಮೈಸೂರು-570009

# ಶೇಕ್‌ಸ್ಪಿಯರ್‌ನ ಹೊಸ ಪದ್ಯ

—ರಾಮಚಂದ್ರದೇವ

ಕಳೆದು ಹೋಗಿದೆಯೆಂದು ತಿಳಿದಿದ್ದ ಕೃತಿಗಳು, ಪ್ರಖ್ಯಾತ ದಿವಂಗತ ಕವಿಗಳ ಹೊಸಕೃತಿಗಳು, ಅಚಾನಕವಾಗಿ ಪತ್ತೆಯಾಗುವುದುಂಟು. ಪಂಪನೇ ಈ ಶತಮಾನದ ಪತ್ತೆ. ಅಸಗ, ಗುಣವರ್ಮ ಎಂದು ಮೊದಲಾಗಿ ಹಳೆಯ ಕವಿಗಳ ಹೆಸರು, ಒಂದೆರಡು ಪದ್ಯ ಗೊತ್ತು. ಅವರ ಸಂಪೂರ್ಣ ಕೃತಿ ಸಿಕ್ಕಿಲ್ಲ. ಎನಿತ್ತೆನಿತ್ತಂಬುಜಪತ್ರ ನೇತ್ರೆಯಾ ಬರೆದವನ ಇಡೀ ಕಾವ್ಯ ಓದುವ ಸುಖ ಯಾರಿಗೆ ಬೇಡ? ಕಳೆದು ಹೋಗಿದೆಯೆಂದು ಹೇಳಲಾದ ಭಾಸನ, ಅಥವಾ ಸಾಪೊಕ್ಲಿಸನ ನಾಟಕಗಳು, ಅಥವಾ ನಮ್ಮ ಇತ್ತೀಚಿನ ಸಂಸರ ಸಿಕ್ಕದ ನಾಟಕ ಮರಳಿ ಸಿಕ್ಕುವ ಕಲ್ಪನೆ ಮೈರೋಮಾಂಚಿಸುವುದು.

1985ರಲ್ಲಿ ಜಗತ್ತಿನ ಸಾಹಿತ್ಯದಲ್ಲಿ ನಡೆದ ಒಂದು ಮಹಾದ್ಭುತ ಘಟನೆ ಯೆಂದರೆ ಶೇಕ್‌ಸ್ಪಿಯರ್‌ನ ಹೊಸ ಪದ್ಯವೊಂದರ ಶೋಧ. ಇದು ಸಿಕ್ಕಿದ್ದು ಗ್ಯಾರಿ ಟೇಲರ್ ಎಂಬ ಒಬ್ಬ ವಿದ್ವಾಂಸರಿಗೆ. ಇವರು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ದಲ್ಲಿ ಅಧ್ಯಾಪಕರು. ವೃತ್ತ ಪತ್ರಿಕಾ ವರದಿಗಳ ಪ್ರಕಾರ ಆಕ್ಸ್‌ಫರ್ಡಿನ ಬಾಡ್ಲಿಯನ್ ಲೈಬ್ರೆರಿಯಲ್ಲಿರುವ ರಾಲಿನ್ಸನ್ ಸಂಗ್ರಹದಲ್ಲಿದ್ದ ಎಲಿಜಾಬೆಥನ್ ಕಾವ್ಯಸಂಗ್ರಹದ ಒಂದು ಹಸ್ತಪ್ರತಿಯಲ್ಲಿ ಅವರಿಗೆ ಈ ಪದ್ಯ ಸಿಕ್ಕಿತು. ಹಸ್ತಪ್ರತಿಯಲ್ಲಿ ಪದ್ಯದ ಕೆಳಗೆ ವಿಲಿಯಂ ಶೇಕ್‌ಸ್ಪಿಯರ್ ಎಂದು ಬರೆಯಲಾಗಿದೆಯಂತೆ. ಹದಿನೆಂಟನೇ ಶತ ಮಾನದಲ್ಲಿ ಕೆಂಪು ರಿಬ್ಬನ್ನಿನಲ್ಲಿ ಕಟ್ಟಿಟ್ಟ ಈ ಹಸ್ತಪ್ರತಿಯನ್ನು ಅನಂತರ ಇದುವರೆಗೆ ಯಾರೂ ತೆಗೆದಿರಲಿಲ್ಲದೆ ಈ ಪದ್ಯ ತುಬ್ಬಾಗಿರಲಿಲ್ಲ.

ಹಸ್ತಪ್ರತಿಯ ಕಾಲ ಸುಮಾರು 1630–ಶೇಕ್‌ಸ್ಪಿಯರ್ ನಿಧನಾನಂತರ ಸುಮಾರು ಒಂದೂವರೆ ದಶಕಗಳ ಬಳಿಕ ತಯಾರಾದ ಸಂಗ್ರಹ ಇದು. ಈ ಪದ್ಯವನ್ನು ಶೇಕ್‌ಸ್ಪಿಯರ್ 1580ರ ದಶಕದ ಕೊನೆಯ ವರ್ಷಗಳಲ್ಲಿ ಬರೆದಿರಬೇಕೆಂದು ವಿದ್ವಾಂ ಸರು ತರ್ಕಿಸುವರು. ಅಂದರೆ ಇದು ಆತನ ಬರೆವಣಿಗೆ ಪ್ರಾರಂಭದ ಮೊದಲ ವರ್ಷ ಗಳಲ್ಲಿ ಬರೆದ ಪದ್ಯ. ಅಂದಾಜಿನ ಪ್ರಕಾರ ಆತ ತನ್ನ ಬರೆವಣಿಗೆ ಪ್ರಾರಂಭಿಸಿದ್ದು

---

ರಾಮಚಂದ್ರದೇವ, ಸಹಾಯಕ ಸಂಪಾದಕರು, ಪ್ರಜಾವಾಣಿ, ಎಂ. ಜಿ. ರಸ್ತೆ, ಬೆಂಗಳೂರು-560001

ಸುಮಾರು 1584ರಲ್ಲಿ. ಅಲ್ಲಿಂದ 1592ರ ವರೆಗಿನ ಅವಧಿಯಲ್ಲಿ ಆತ ಕಾಮೆಡಿ ಆಫ್ ಎರರ್ಸ್, ಟೇಮಿಂಗ್ ಆಫ್ ದಿ ಶ್ರೂ, ಟು ಜಂಟಲ್ ಮೆನ್ ಆಫ್ ವೆರೋನಾ ಎಂಬ ಕಾಮೆಡಿಗಳನ್ನೂ, ಹೆನ್ರಿ ದಿ ಸಿಕ್ತ್‌ನ ಮೂರು ಭಾಗಗಳು, ರಿಚರ್ಡ್ ದಿ ಥರ್ಡ್ ಮತ್ತು ಕಿಂಗ್ ಜಾನ್ ಎಂಬ ಐತಿಹಾಸಿಕ ನಾಟಕಗಳನ್ನೂ, ಟೈಟಸ್ ಆಂಡ್ರನಿಕಸ್ ಎಂಬ ದುರಂತ ನಾಟಕವನ್ನೂ ಬರೆದನೆಂಬ ಅಭಿಪ್ರಾಯವಿದೆ. ಈ ಪದ್ಯ ಬಹುಶಃ ಆ ನಾಟಕಗಳನ್ನು ಬರೆದ ಕಾಲಾವಧಿಯದ್ದು.

ಈ ಪದ್ಯ ಶೇಕ್‌ಸ್ಪಿಯರ್‌ನದಲ್ಲ ಎಂಬ ವಾದ ಇದೆ. ಶೇಕ್‌ಸ್ಪಿಯರ್ ತನ್ನ ಕಾಲದಲ್ಲಿ ಬಹಳ ಪ್ರಖ್ಯಾತ ಲೇಖಕನಾದ್ದರಿಂದ ಬೇರೆ ಯಾರೋ ಬರೆದುದನ್ನು ಅವನ ಹೆಸರಿನಲ್ಲಿ ಪ್ರಕಟಿಸಿ ಬೇಗ ಮಾರಾಟಮಾಡಲು ಪ್ರಕಾಶಕರು ಪ್ರಯತ್ನಿಸಿರುವುದುಂಟು. ಈ ಪದ್ಯ ಅಂಥದು, ಬೇರೆ ಜನ ಬರೆದದ್ದು ಎಂಬುದು ವಾದ. ಆದರೆ ಎಸ್. ಸ್ಕಾಯೆನ್‌ಬಾಮ್, ಸ್ಟಾನ್ಲೆ ವೆಲ್ಸ್‌ನಂಥ ನಂಬಲರ್ಹ ಶೇಕ್‌ಸ್ಪಿಯರ್ ವಿದ್ವಾಂಸರು ಇದು ಶೇಕ್‌ಸ್ಪಿಯರ್ ಪದ್ಯ ಹೌದು ಎಂದು ಒಪ್ಪಿರುವರು.

ಪದ್ಯ ಹೇಳಿಕೊಳ್ಳುವಂಥದಲ್ಲ. ಮಣ್ಣ ಹುಡಿಯಲ್ಲಿ ವಿಶ್ವವನ್ನು ಪ್ರತಿಫಲಿಸುವ ಶೇಕ್‌ಸ್ಪಿಯರ್ ಕ್ರಮ ಇದರಲ್ಲಿ ಕಾಣುವುದಿಲ್ಲ. ಶೇಕ್‌ಸ್ಪಿಯರ್ ತನ್ನ ಬರೆವಣಿಗೆಯ ಮೊದಲ ವರ್ಷಗಳಲ್ಲಿ ಸಾಕಷ್ಟು ಸಾಧಾರಣವಾಗಿ ಬರೆದಿದ್ದಾನೆಂದು ಈ ಪದ್ಯ ಮತ್ತೊಮ್ಮೆ ನೆನಪಿಸುವುದು. ಇಂಥಾ ಪದ್ಯ ಬರೆದವ ಮುಂದಿನ ಸುಮಾರು 25ವರ್ಷಗಳೊಳಗೆ ಕಿಂಗ್‌ಲಿಯರ್ ಬರೆದ ಎಂದರೆ, ಅದರರ್ಥ ಒಂದೇ—ಕಾವ್ಯ ಬರೆದ ಕೆಲಸವನ್ನು, ಜೀವನಕ್ಕೆ ಪ್ರತಿಸ್ಪಂದಿಸುವುದನ್ನು ಕಷ್ಟಪಟ್ಟು ಕಲಿಯಬೇಕಾಗುತ್ತದೆ, ಅದು ಹುಟ್ಟಿನಿಂದ ಬರುವುದಲ್ಲ.

ಪದ್ಯದಲ್ಲಿ ಅದರ ಲಯಗಾರಿಗೆ ಮಾತ್ರ ವಿಶೇಷವಾಗಿ ಕಾಣುತ್ತದೆ. ಇಂಗ್ಲಿಷ್ ಭಾಷೆಗೆ ಮೂಲವಾದ ಲಯಗಾರಿಕೆ ಇದು. ಅದನ್ನು ತಿಳಿಯಲು ಪದ್ಯವನ್ನು ಮೂಲದಲ್ಲೇ ಓದಬೇಕು.

ಆ ಪದ್ಯದ ಕೆಲವು ಆಯ್ದ ಸಾಲುಗಳ ಅನುವಾದ ಇಲ್ಲಿ ಕೊಟ್ಟಿದೆ.

ಸಾಯಲೆ ? ಅಥವಾ ಓಡಲೆ
ಪ್ರೇಮಿಯ ಗಾಳ-ಮೋಸಗಳಿಂದ,
    ದುಃಖ ವೃದ್ಧಿಸುತ ?
ನನ್ನ ರಕ್ಷಿಸಿಕೊಳಲೆ? ಕಳಿಸಲೇ ?
ತೋರಿಸಿಕೊಡಲೆ, ಪಶ್ಚಾತ್ತಾಪ ಪಡದಿರಲೆ,
    ನನ್ನ ಕ್ರಿಯೆ ಪರಂಪರೆಯು ?

* * *

ಎಲ್ಲ ಕರ್ತವ್ಯಗಳಲ್ಲಿ ಅವಳ ಸೌಂದರ್ಯ
ನನ್ನನ್ನು ಅವಳ ಸೇವಕನಾಗಿ ಬಂಧಿಸಿದೆ ನಿರಂತರ.
ಅವಳು ಮುಖ ತಿರುವಿದರೆ, ನಾನು ದುಃಖಿಸುವೆ
ನಿರಾಶೆಗೆ ಕಂತುವೆ, ಸಂತೋಷಿಸದೆ ಎಂದಿಗೂ.

* * *

ಆದರೂ ನನ್ನ ಕಾಮಕ್ಕೆ ಬೇಕು ಹೊರದಾರಿ
ನನ್ನ ಒಳ ನೋವನ್ನು ವಿವರಿಸಬೇಕು
ಪ್ರೇಮ ವೃದ್ಧಿಸುತ.
ಅವಳ ನಗು ಹೊಡೆದೋಡಿಸುವುದು
ನನ್ನ ನರಳಾಟಗಳ; ಹುಚ್ಚೇರಿಸಿದರೆ ಸಾಕು
ನನ್ನೆಲ್ಲ ಆಸೆಗಳು ನನ್ನ ತೊರೆಯುವುವು.
ಶಂಕಾಸ್ಪದ ಅನುಮಾನವೆ, ದೂರವಿರು,
ನೀನೇ ನನ್ನ ಹಿಂಸಕ.
ದೂರಕ್ಕೆ ಹಾರು, ಹಂಡಿ ಮಡಕೆ ಕಟ್ಟು,
ನಾನು ಪ್ರೀತಿಸುವೆ; ಆಸೆ ನನ್ನನ್ನು ಗರ್ಭಿಸಿದೆ.

## ಸಿದ್ಧತೆ

ಸಿದ್ಧ.
ಎಲ್ಲ ಸಾಮಾನು ಸರಂಜಾಮು
ಹಾಸಿಗೆ ಪೆಟ್ಟಿಗೆ
ಕಟ್ಟಲು
ಹಗ್ಗ-ದಾರ ಹಾದಿಗೆ
ಬುತ್ತಿ ನೀರು

ಬಿ. ಎಂ. ಬಸಪ್ಪ C/o ಎಸ್. ಎಸ್. ರಾಘವೇಂದ್ರರಾವ್, 64, ಕಾಮಾಕ್ಷಿ ಲೇಔಟ್ ಪೂರ್ವ,
ನ್ಯೂ ಡಬಲ್ ರೋಡ್, ಸರಸ್ವತಿಪುರಂ, ಮೈಸೂರು-23

ಮಾತಿಗೆ,

ಜತೆಗೊಬ್ಬ ಸಂಗಾತಿ.

ಇದ್ದಕ್ಕಿದ್ದಂತೆ ಕಾರಿರುಳ

ಅರ್ಧ ರಾತ್ರಿ

ಬೆಳಕಿನಾಸೆಗೆ ಸತ್ಯದ ವಾಸನೆಗೆ

ಹೊರಟ ಬಿಡು ಬೀಸು

ಎಚ್ಚರ ಪ್ರಯಾಣದ

ಪಥಿಕ.

ಬುದ್ಧನಂತಲ್ಲ ನಾನು :

ನಿತ್ಯದ ಗೋಳು

ಆರಂಭಕ್ಕೆ ಮುಖಮಾರ್ಜನೆ

ಮಲ ವಿಸರ್ಜನೆಗೆ

ನೀರು–ನಳ

ಗೊರ ಗೊರ ರಾತ್ರಿ

ಅವಾಂತರದ ಫಲ ಹೊಟ್ಟೆ

-ಗೆ ಸಿಟ್ಟು ತುಂಬಿ

ಹಾಡಿ ಹತ್ತಿ ;

ಆಫೀಸು, ಕಡತ, ಹಳೆ ಲೆಕ್ಕದ

ನಿರ್ಜೀವ

ಪುಸ್ತಕಗಳಲಿ ಆಯುಸ್ಸು

ಮುಗಿಸುವ ಲೆಕ್ಕ ಬರೆಯುತ್ತಾ

ನಾಳೆಗೆ

ಬುದ್ಧನಾಗುವ ಯೋಜನೆ

ಮಾಡುವುದು.

—ಬಸಪ್ಪ ಬೆಳವಾಡಿ

# ಕನ್ನಡ ಸಾಹಿತ್ಯ ಮತ್ತು ಮನುಷ್ಯನ ಹುಡುಕಾಟ

— ಬರಗೂರು ರಾಮಚಂದ್ರಪ್ಪ

ಕನ್ನಡ ಸಾಹಿತ್ಯವನ್ನು ಪರಿಶೀಲಿಸಿದಾಗ ಮುಖ್ಯವಾಗಿ ಕಾಣುವ ಒಂದು ಅಂಶವೆಂದರೆ ವಿವಿಧ ಕಾಲಘಟಗಳಲ್ಲಿ ಕವಿಗಳು ಕಂಡ ಮನುಷ್ಯನ ಕಲ್ಪನೆ. ಈ ಮನುಷ್ಯ ಆಯಾಕಾಲದ ಹಾಗೂ ಕವಿಯ ಆಶಯ-ಆದರ್ಶಗಳ ಒತ್ತಾಸೆ ಮತ್ತು ಹುಡುಕಾಟದಲ್ಲಿ ಹುಟ್ಟಿಬಂದವನು.

ಮೊದಲಿಗೆ ಏಳನೇ ಶತಮಾನದ ಬಾದಾಮಿ ಶಾಸನವನ್ನೇ ನೋಡಬಹುದು. ರಾಜನೊಬ್ಬನನ್ನು ಹೊಗಳುವ ಪ್ರಸಿದ್ಧ ಪದ್ಯ ಹೀಗೆ.

ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯನ್
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆರನಲ್ಲ

ಮೇಲಿನ ಪದ್ಯದಲ್ಲಿ ರಾಜನ ವ್ಯಕ್ತಿತ್ವವನ್ನು ಹೊಗಳಿದ್ದರೂ ಅದು ಇಡಿಯಾಗಿ ಅಂದಿನ ಆದರ್ಶ ಮನುಷ್ಯನ ಕಲ್ಪನೆಯಾಗಿದೆ. ಈ ಪ್ರಶಂಸೆಯ ಹಿಂದೆ ಪರಿಕಲ್ಪನೆಯೊಂದರ ಬೀಜರೂಪವಿದೆ. ರಾಜ್ಯದ ಪ್ರಜೆಗಳಲ್ಲಿ ಇರಬೇಕಾದ ಗುಣವಿಶೇಷಗಳನ್ನು ಒಟ್ಟಾರೆ ರಾಜನೇ ಪಡೆದು ಅವನೇ ಆದರ್ಶಪ್ರಾಯನಾಗುವ ಅನಿವಾರ್ಯ ಸಂದರ್ಭದ ಹಿನ್ನೆಲೆಯಲ್ಲಿ ಈ ಪರಿಕಲ್ಪನೆಯ ಪರಿಶೀಲನೆ ಮಾಡಬೇಕು. ಸಾಧು ಸ್ವಭಾವದವರಿಗೆ ಸಾಧುವಾಗಿಯೂ, ಮಧುರ ಸಂಬಂಧಿಗಳಿಗೆ ಮಾಧುರ್ಯವಾಗಿಯೂ ಇರುವ ಈತ ತೊಂದರೆ ಕೊಡುವ ಕಲಿಗಳಿಗೆ 'ಕಲಿಯುಗ ವಿಪರೀತನ್'. ಮನುಷ್ಯನೆಂದರೆ ಹೀಗೆ ಇರಬೇಕೆಂಬ ಆಶಯ ಈ ಪದ್ಯದಲ್ಲಿ, ಪ್ರಶಂಸಾರೂಪದಲ್ಲಿ ಮೂಡಿ ಬಂದಿದೆ. ಇದು ಆ ಕಾಲದ ಆದರ್ಶ ಮಾನವನ ಕಲ್ಪನೆ. ಕಡೇ ಪಕ್ಷ ಸಮಾಜದ ಭಾಗವೊಂದು ಇಂಥ ಆದರ್ಶವನ್ನು ಒಪ್ಪಿದೆಯೆಂದು ಭಾವಿಸಬಹುದು.

ಕನ್ನಡದ ಅತ್ಯಂತ ಮಹತ್ವದ ಕವಿಗಳಲೊಬ್ಬನಾದ ಪಂಪನಲ್ಲಿ ಈ ಮನುಷ್ಯನ ಶೋಧನೆಯಿದೆ. ಆದ್ದರಿಂದಲೇ ಅವನ 'ಭಾರತ' ವ್ಯಾಸಭಾರತದ ಕಾರ್ಬನ್ ಕಾಪಿಯಾಗಲಿಲ್ಲ. ತನ್ನ ಮತ್ತು ತನ್ನ ಕಾಲದ ಅನುಭವ ಹಾಗೂ ಅರಿವಿನಿಂದ ಮೂಡಿದ

ಒಳನೋಟದಲ್ಲಿ ಹೊಸ ವ್ಯಕ್ತಿತ್ವವನ್ನು ಕಡೆದುಕೊಟ್ಟ ಪಂಪ, ಬೇರೆ ಬೇರೆ ಪಾತ್ರಗಳ ಮೂಲಕ ಮಿಡಿಯುವ ಮಾತುಗಳು ಕೇವಲ ಸಾಂದರ್ಭಿಕವಾಗದೆ ಸಾಮಾಜಿಕವಾಗುತ್ತವೆ. ಮನುಷ್ಯನ ಹುಡುಕಾಟದಲ್ಲಿ ಮೂಡಿದ ಪಂಪನ ಪರಿಕಲ್ಪನೆ ''ಮಾನವ ಕುಲ ತಾನೊಂದೆ ವಲಂ'' ಎಂದು ಮಿಡಿದದ್ದು ಮಾತ್ರವಲ್ಲ, 'ಕರ್ಣ ರಾಸಾಯನ'ವನ್ನು ಸಹ ಕೊಡುತ್ತದೆ. ''ಕುಲಂ ಕುಲಮಲ್ತು ಚಲಂ ಕುಲಂ ಗುಣಂ ಕುಲಮಭಿಮಾನಮದೊಂದೆ ಕುಲಂ" ಎಂಬ ಮಾತು ಕುಲದ ಕಲ್ಪನೆಗೆ ಹೊಸ ಅರ್ಥ ವಿಧಾನವನ್ನೇ ರೂಪಿಸಿಬಿಡುತ್ತದೆ. ಹಳೆಯ ಕುಲಪದ್ಧತಿಯನ್ನು 'ಕುಲಮಲ್ತು' ಎನ್ನುವ ಈ ನಿಲುವಿನಲ್ಲಿ ನಿರಾಕರಿಸುತ್ತ, ಚಲ ಮತ್ತು ಗುಣಗಳು ಕುಲದ ಸ್ಥಾನವನ್ನು ಪಡೆಯುತ್ತವೆ. ಹುಟ್ಟನ್ನು ಮಾನದಂಡವಾಗುಳ್ಳ ಕುಲಪದ್ಧತಿಯ ನಿರಾಕರಣೆಯಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆಯುವುದು "ಅಭಿಮಾನಮದೊಂದೆ ಕುಲಂ''-ಎಂದು ಒತ್ತಿ ಹೇಳುವ ಒತ್ತಾಸೆ. ಕೀಳು ಕುಲದಲ್ಲಿ ಹುಟ್ಟಿದ್ದು ಅವಮಾನದ ಸಂಗತಿಯೆಂದು ಭಾವಿಸಿ, ಬೆಂದುಹೋಗುವ ಸಾಮಾಜಿಕ ಸಂದರ್ಭದಲ್ಲಿ 'ಅಭಿಮಾನಮದೊಂದೆ ಕುಲಂ' ಎಂಬ ಮಾತಿಗೆ ವಿಶೇಷ ಮಹತ್ವ ಬರುತ್ತದೆ. ಕೆಳ ಜಾತಿಗಳಲ್ಲಿ ಜಾಗೃತಿಯುಂಟು ಮಾಡಲು ಇಪ್ಪತ್ತನೇ ಶತಮಾನದಲ್ಲಿ ಕೆಲವು ಕಡೆ ನಡೆದ ಸ್ವಾಭಿಮಾನ ಚಳುವಳಿಯ ಹಿನ್ನೆಲೆಯಲ್ಲಿ ಪಂಪನ "ಕುಲ ಕಲ್ಪನೆ'' ಯನ್ನು ಅರ್ಥ ಮಾಡಿಕೊಂಡಾಗ ಆತನ ''ಆ ಧು ನಿ ಕ ತೆ'' ಅರ್ಥವಾಗುತ್ತದೆ. ಆ ಪರಿಕಲ್ಪನೆಯ ಹಿಂದಿರುವ ಪ್ರಗತಿಪರತೆ ಬದುಕಿನ ಮುನ್ನೋಟವಾಗಿ ರೂಪುಗೊಂಡಿರುವುದರಿಂದಲೇ ಪಂಪ ಕರ್ಣನನ್ನು ವಿಶೇಷವಾಗಿ ರೂಪಿಸಲು ಮತ್ತು ದುರ್ಯೋಧನನಲ್ಲೂ ಮನುಷ್ಯನನ್ನು ಹುಡುಕಲು ಸಾಧ್ಯವಾಗಿದೆ. ಅರಿಕೇಸರಿಯೊಂದಿಗೆ ಸಮೀಕರಿಸಲ್ಪಟ್ಟ ಅರ್ಜುನನಗಿಂತ ಹೆಚ್ಚಾಗಿ ಕರ್ಣಾದಿಗಳು ನಮ್ಮ ಕರುಳಿನ ಕಣ್ಣಾಗುವುದು ಪಂಪನ ಕಲೆಗೆ ಒಲವು-ನಿಲುವಿಗೆ, ಉತ್ತಮ ಉದಾಹರಣೆ.

ನಿಜ, ಪಂಪ 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್' ಎಂದು ತನ್ನ ಆದರ್ಶ ಮಾನವನನ್ನು ಮುಂದಿಟ್ಟಿದ್ದಾನೆ. ಪಂಪನ ಮೆಚ್ಚುಗೆಯ ಮಾತುಗಳಾದ ಈ ಚಾಗ ಭೋಗಾದಿಗಳೆಲ್ಲ ಹುಟ್ಟೊಡೆದು ಕಾಣಿಸುವುದು ಬೇರೆ ಬೇರೆ ಪಾತ್ರಗಳಲ್ಲಿ. ಆ ಪಾತ್ರಗಳು ಜೀವಂತಗೊಳ್ಳುವ ಬದುಕಿನ ಪರೀಕ್ಷೆಯಲ್ಲಿ. 'ಚಲದೊಳ್ ದುರ್ಯೋಧನಂ ನನ್ನಿಯೊಳ್ ಇನತನಯಂ.........'ಇತ್ಯಾದಿಯಾಗಿ ಹೇಳುವಾಗ ಪಂಪ ತನ್ನ ಪಾತ್ರಗಳ ಪ್ರಧಾನ ಗುಣವಿಶೇಷಗಳನ್ನು ಪ್ರಸ್ತಾಪಿಸಿದ್ದಾನೆ. ಇಲ್ಲಿಯೂ ಅವನು ಮನುಷ್ಯನನ್ನು ಅರ್ಥ ಮಾಡಿಕೊಳ್ಳುವ ವಿಧಾನವನ್ನು ಗಮನಿಸಬಹುದು. ಆತ ಎಲ್ಲಾ ಗುಣಗಳನೂ ಒಬ್ಬನಲ್ಲೇ ಕಾಣುವುದಿಲ್ಲ. ಅದು ನಿಜ ಜೀವನದಲ್ಲಿ ಅಸಾಧ್ಯದ ಸಂಗತಿ. ಅಂತೆಯೇ ಪ್ರತಿ ವ್ಯಕ್ತಿಗೂ ಪ್ರಧಾನ ಗುಣ ಸ್ವಭಾವವೊಂದು ಇದ್ದು, ಆ ಮೂಲಕವೇ 'ವ್ಯಕ್ತಿತ್ವ'

ವನ್ನು ಕಾಣುವ ಕ್ರಮ ಸಮಾಜದಲ್ಲಿದೆ. ಇಂಥ ಸಹಜ ಕ್ರಮದಲ್ಲೇ ಪಂಪನು ಮನುಷ್ಯನ ಇತಿ ಮಿತಿಗಳನ್ನು ಅರ್ಥ ಮಾಡಿಕೊಳ್ಳುದರಿಂದ ನಮಗೆ ತೀರಾ ಹತ್ತಿರವಾಗುತ್ತಾನೆ.

ಪಂಪನ ದುರ್ಯೋಧನ, ಕವಿಯ 'ಮಾನವ ಶೋಧನೆ'ಯ ಉತ್ತಮ ಉದಾಹರಣೆಯಾಗುತ್ತಾನೆಂಬುದಕ್ಕೆ 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಪ್ರಸಂಗದ ಸ್ನೇಹಪರತೆ ಮತ್ತು ಪ್ರೀತಿಗಳೊಂದಿಗೆ ವಿಲಾಪ ಸಂದರ್ಭವನ್ನು ಮುಖ್ಯವಾಗಿ ಪರಿಶೀಲಿಸಬೇಕು.

ಪಂಪಭಾರತದ ಹದಿಮೂರನೇ ಆಶ್ವಾಸದಲ್ಲಿ ದುರ್ಯೋಧನ ತನ್ನ ಸಂಬಂಧಿಗಳನ್ನೆಲ್ಲ ಕಳೆದುಕೊಂಡ ಏಕಾಕಿ. ಸಾವಿನ ಸಾಮ್ರಾಜ್ಯವಾದ ರಣರಂಗದಲ್ಲಿ ಬಂಧು ಬಳಗದ ಹೆಣದರ್ಶನದಲ್ಲಿ ತನ್ನನ್ನು ತಾನು ತೋಡಿಕೊಳ್ಳುವ ರೀತಿ ಈ ಪಾತ್ರದ ಪಾತಳಿ ಮತ್ತು ಪಂಪನ ರೀತಿಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ. ದುರ್ಯೋಧನ ತನ್ನೆಲ್ಲ ಮನುಷ್ಯ ಸ್ವಭಾವಗಳೊಂದಿಗೆ ಒಬ್ಬ ಸರ್ವಾಧಿಕಾರಿ ಲಕ್ಷಣಗಳುಳ್ಳ ಪ್ರಭುವೂ ಹೌದು. ಆತ ಕೇಂದ್ರೀಕೃತ ಅಧಿಕಾರ ವ್ಯವಸ್ಥೆಯ ಪ್ರತೀಕ. ಕೃಷ್ಣನೇ ಬಂದು ಐದುಗ್ರಾಮಗಳನ್ನು ಕೇಳಿದಾಗಲೂ ಕೊಡಲು ನಿರಾಕರಿಸುವಷ್ಟು ಸರ್ವಾಧಿಕಾರಿ ಗುಣ ಅವನ ಮನಸ್ಸಿನಲ್ಲಿದೆ. ಆದರೆ ಇದೇ ದುರ್ಯೋಧನ ತನ್ನವರನ್ನೆಲ್ಲ ಕಳೆದುಕೊಂಡ ಸಂದರ್ಭದಲ್ಲಿ ತನ್ನೊಳಗೆ ಇಳಿದು ಸತ್ಯಗಳ ಸಮೇತ ಹೊರ ಬರುತ್ತಾನೆ. ಪ್ರಭುತ್ವದ ಪಟ್ಟದಲ್ಲಿ ತನ್ನೊಳಗೆ ಹೂತುಹೋಗಿದ್ದ ಅಥವಾ ಹೂತು ಹಾಕಲ್ಪಟ್ಟ ಭಾವಕೋಶದ ಬಿರಟೆ ತೆಗೆಯಲ್ಪಡುವುದು ಆತನ ಏಕಾಕಿತನದ ಒತ್ತಡದಲ್ಲಿ ಕಾಡುವ ಏಕಾಕಿತನದಲ್ಲಿ ದುರ್ಯೋಧನನು ಹೆಚ್ಚು ಅಂತರ್ಮುಖಿಯಾದಂತೆಲ್ಲಾ ಅಂತರ್ಗತ ಸತ್ಯಗಳನ್ನು ಹೊರಹಾಕುತ್ತ ಪ್ರಭುತ್ವದ ಪೊರೆ ಕಳಚಿಕೊಳ್ಳುತ್ತ ಮನುಷ್ಯ ಮಾತ್ರನಾಗುವ ರೀತಿ ಪಂಪನಲ್ಲಿದೆ. ಇದಕ್ಕೆ ಉತ್ತಮ ಉದಾಹರಣೆ ಕರ್ಣನ ಹೆಣದೆದುರು ಆತ ಆಡುವ ಮಾತುಗಳು.

ಅಱಿಯಂ ಸೋದರನೆಂದು ಧರ್ಮತನಯಂ ನಿರ್ವ್ಯಾಜದಿಂ ನಿನ್ನ ಶೌ
ನಱಿವೆಂ ಮುನ್ನಱಿದಿರ್ದುಮೆನ್ನರಸ ನಾನೇಕಿತ್ತೆನಿಲ್ಲೇಕೆ ಪೇ
ೞೞಿಪಲ್ಕೊಲ್ದೆನುಮಿಲ್ಲ ಕಾರ್ಯವಶದಿಂ ಕೂರ್ಪಂತೆವೋಲ್ ನಿನ್ನ ನಾಂ
ನೆಱ ಕೊಂದೆಂ ಮುಳಿಸಿಂದ ಮಂಗನೃಪತೀ ಕೌಂತೇಯರೇಂ ಕೊಂದರೇ ॥

ಈ ಪದ್ಯದಲ್ಲಿ ದುರ್ಯೋಧನ ಅಷ್ಟುಕಾಲ ತನ್ನೊಳಗೆ ಅಡಗಿಸಿಕೊಂಡಿದ್ದ ಸತ್ಯವೊಂದನ್ನು ಸ್ಫೋಟಿಸುತ್ತಾನೆ. ಧರ್ಮರಾಜನಿಗೂ ಗೊತ್ತಿಲ್ಲದ ಕರ್ಣನ ಪೂರ್ವ

ವೃತ್ತಾಂತ ತನಗೆ ಗೊತ್ತಿದ್ದರೂ ರಾಜಪ್ರಭುತ್ವವನ್ನು ತಾನೇಕೆ ಕೊಡಲಿಲ್ಲ ಎಂದು ಅಳಲುತ್ತಲೇ "ನಿನ್ನ ನಾಂ ನೆಲು ಕೊಂದೆಂ......ಕಾಂತೆಯರೇ ಕೊಂದರೆ" ಎನ್ನು ವಾಗ ದುರ್ಯೋಧನನ ಕರ್ಣ ಪ್ರೀತಿಯಷ್ಟೇ ಕಾಣುವುದಿಲ್ಲ: ಆತ ತಲುಪಿರುವ ಮಾನಸಿಕ ಸ್ಥಿತಿಯೂ ಪ್ರಕಟವಾಗುತ್ತದೆ. ಯಾಂತ್ರಿಕ ವ್ಯವಹಾರದ ಸಿಂಹಾಸನಾರೂಢ ಪ್ರಭುತ್ವದಿಂದ ನೆಲಕ್ಕಿಳಿದ ದುರ್ಯೋಧನ ಕರ್ಣನನ್ನು ಕುರಿತ ಸತ್ಯವನ್ನು ಸ್ಫೋಟಿಸು ವಾಗ ಕರ್ಣ ಹೆಣವಾಗುತ್ತಾನೆಂಬುದು ಎಂಥ ವ್ಯಂಗ್ಯ! ಅದೇನೇ ಇರಲಿ, ಇಲ್ಲಿನ ದುರ್ಯೋಧನ ಅಂತರ್ಮುಖತೆ ಮತ್ತು ಬಹಿರ್ಮುಖತೆಗಳ ನಡುವೆ ಸೆಣಸಾಡುವ ಒಬ್ಬ ಮನುಷ್ಯ ಹೆಚ್ಚು ಅಂತರ್ಮುಖಿಯಾದಂತೆಲ್ಲ ಒಳಗೆ ಹುದುಗಿದ 'ಸತ್ಯ'ಗಳನ್ನು ಹೊರಹಾಕುವ ಸಾಚಾಮನುಷ್ಯ. ಆದರೆ ಅಂತರ್ಮುಖಿಯಾಗಿಯೇ ಉಳಿದರೆ ಹೆಣಗಳ ನಡುವೆ ಹೂತು ಹೋಗುವ ಅಪಾಯವಿದೆ. ಈ ಅಪಾಯದಿಂದಲೂ ಪಂಪನ ದುರ್ಯೋಧನ ಪಾರಾಗುತ್ತಾನೆ. ಹೊರಗೆ ಕರೆಯುವ ಕದನ ಕರ್ತವ್ಯದ ಕರೆಯೂ ಅವನಿಗೆ ಕೇಳಿಸುತ್ತದೆ. ಆದ್ದರಿಂದಲೇ ಅತಿ ಅಂತರ್ಮುಖಿಗೆ ಒದಗಬಹುದಾದ ಹತಾಶೆ ಹುಟ್ಟುವ ಬದಲು ಅಳಲು ಮಾತ್ರ ಆವರಿಸುತ್ತದೆ. ಮರುಕ್ಷಣದಲ್ಲೇ ಅದನ್ನು ದಾಟಿ ಪಾಂಡವರನ್ನು ಎದುರಿಸುವ ಮಾತನಾಡುತ್ತಾನೆ. ಅವಮಾನ ಅಳಲುಗಳಿಂದ ಕುಗ್ಗಿಹೋದ ಮನಸ್ಸಿನಲ್ಲಿ ಮತ್ತೆ ಸ್ಥೈರ್ಯ ತುಂಬಿಕೊಳ್ಳುವ ಸ್ವಾಭಿಮಾನವೂ ಸೇರಿ ದುರ್ಯೋಧನನ ಅಂತರಂಗದ ಹೋರಾಟ ಒಬ್ಬ 'ಮನುಷ್ಯ' ನನ್ನು ಕಡೆದುಕೊಡುತ್ತದೆ. ಇದು ಪಂಪನ ಸಾಧನೆ. ಮುಂದೆ ರನ್ನ ಕವಿ ಈ ಅಂಶ ವನ್ನೇ ಕೇಂದ್ರವಾಗಿಟ್ಟುಕೊಂಡು ಮತ್ತಷ್ಟು ಸ್ಪಷ್ಟಗೊಳಿಸುತ್ತಾನೆ; ವಿಸ್ತರಿಸುತ್ತಾನೆ.

ಪಂಪನಲ್ಲಿ ಬರುವ 'ಚಲದೊಳ್ ದುರ್ಯೋಧನಂ' ಎಂಬ ಗುಣ ಸ್ವಭಾವ ಮತ್ತು 'ಏನಭಿಮಾನಧನಂ ಸುಯೋಧನಂ' ಎಂಬ ಮೆಚ್ಚುಗೆಗಳು ರನ್ನನ ಗದಾಯುದ್ಧ ದಲ್ಲಿ ಕೇಂದ್ರ ಪ್ರಜ್ಞೆಯಾಗಿವೆ. ರನ್ನನ ದುರ್ಯೋಧನ ತನ್ನ ಮಾನವೀಯ ಸ್ವಭಾವ ವನ್ನು ಸ್ಫೋಟಗೊಳಿಸಲು ಇದು ಸಹಕಾರಿಯಾಗಿದೆ. ರನ್ನನ ದುರ್ಯೋದನ ಅಭಿಮನ್ಯು ವನ್ನು ಹೊಗಳಿ ವಂದಿಸುವ ಸನ್ನಿವೇಶ ಉದಾತ್ತೀಕರಣದ ಒಂದು ವಿಧಾನವೂ ಆಗಿದೆ. ಆದರೂ ವ್ಯಕ್ತಿತ್ವದ 'ಮಾದರಿ'ಗಳನ್ನು ಮಾತ್ರ ರಚಿಸದೆ ವ್ಯಕ್ತಿತ್ವ ಶೋಧನೆಯಲ್ಲಿ ಮನುಷ್ಯನನ್ನು ಸೃಷ್ಟಿಸುವುದರಿಂದ ಪಂಪನ ಪ್ರಮುಖ ಪಾತ್ರಗಳು ಜೀವಂತವಾಗಿರು ವಂತೆಯೇ ರನ್ನನ ದುರ್ಯೋಧನನೂ ಜೀವಂತನಾಗುತ್ತಾನೆ. ಇದು ಮನಸ್ಸು ಮತ್ತು ಮನುಷ್ಯ ಶೋಧನೆಯ ಫಲ. ನಾಗಚಂದ್ರ ರೂಪಿಸಿದ 'ಉದಾತ್ತರಾವಣ' ನಲ್ಲೂ ಇದೇ ಪ್ರೇರಣೆಗಳನ್ನು ಕಾಣಬಹುದು. ಉದಾತ್ತೀಕರಣದ ಇತರೆ ಇತಿ ಮಿತಿಗಳೇನೇ ಇರಲಿ, ಸಾಂಪ್ರದಾಯಿಕ ಸಾಮಾನ್ಯ ಮಾದರಿಯನ್ನು ಮೀರಿ ಪಾತ್ರ ಸೃಷ್ಟಿ ಮಾಡುವುದು ಹೊಸ ನೋಟದ ವಿಕಾಸ ಎನ್ನಬಹುದು.

ನಾಯಕನನ್ನು ವಿಜೃಂಭಿಸುವುದಕ್ಕಷ್ಟೇ ಮುಖ್ಯವಾಗದೆ, ಪ್ರತಿ ನಾಯಕನೇ ಮುಂತಾದ ಪಾತ್ರಗಳ ಮನಸ್ಸಿನ ಶೋಧನೆಗೆ ಪಂಪಾದಿಗಳು ತೊಡಗಿದ್ದು ಕನ್ನಡ ಸಾಹಿತ್ಯದ ಅಭಿಮಾನಾಸ್ಪದ ವಿಷಯವಾಗಿದೆ.

ವಚನ ಚಳವಳಿ ಒಂದು ಸಾಮಾಜಿಕ ಆಂದೋಲನವಾಗಿ ಉಂಟುಮಾಡಿದ ಪರಿಣಾಮ ಅಗಾಧವಾದದ್ದು ; ಇದರ ಫಲವಾಗಿ ಹುಟ್ಟಿಬಂದ ವಚನ ಸಾಹಿತ್ಯ ಹೊಸ ಸಾಮಾಜಿಕ ಮನುಷ್ಯನನ್ನೇ ಶೋಧಿಸಿತು. ಈ 'ಮನುಷ್ಯ' ಹೊಸ ಸಾಮಾಜಿಕ ವ್ಯವಸ್ಥೆಗೆ ಹಾತೊರೆದ ಆಂದೋಲನದ ಫಲ ಇಲ್ಲಿ ಹೊಮ್ಮಿದ 'ಮನುಷ್ಯ'ನ ಆಶಯ ಜಾತಿಗಳನ್ನು ಮೀರಿದ, ಲಿಂಗಭೇದವನ್ನು ಒತ್ತರಿಸಿದ, ಏಕದೇವೋಪಾಸನೆ ತತ್ವವನ್ನು ಆಧರಿಸಿದೆ. ಜಂಗಮನ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವ ರೀತಿ ಮತ್ತು ಭವಿಗಳ ವಿರೋಧ ವಿಚಾರದಲ್ಲೇ ಆದರ್ಶ ಮಾನವನ ಕಲ್ಪನೆಯೂ ಅಡಗಿದೆ. ಜೊತೆಗೆ ಹೊಸ ಪರಿಕಲ್ಪನೆಗಳೂ ಹುಟ್ಟಿವೆ. "ಕೊಲುವವನೇ ಮಾದಿಗ, ಹೊಲಸು ತಿಂಬವನೇ ಹೊಲೆಯ" ಎಂದು ಹೇಳುವಾಗ ಜಾತಿ ಪದ್ಧತಿಯನ್ನು ಪಲ್ಲಟಗೊಳಿಸುವ ಹೊಸ ಪರಿಕಲ್ಪನೆ ಕಂಡು ಬಂದರೆ "ಆಚಾರವೇ ಸ್ವರ್ಗ ಅನಾಚಾರವೇ ನರಕ" ಎನ್ನುವಾಗ ಮನುಷ್ಯನ ನಡವಳಿಕೆಯಲ್ಲೇ ಸ್ವರ್ಗ ನರಕಗಳನ್ನು ಕಾಣುವ ಹೊಸ ವಿಧಾನವಿದೆ. 'ದೇಹವೇ ದೇವಾಲಯ' ವೆಂಬ ಪರಿಕಲ್ಪನೆ ಪ್ರತಿಷ್ಠಿತ ದೇವ-ಸ್ಥಾನಗಳಿಗೆ ಹೊರತಾಗಿದ್ದು ಮನುಷ್ಯನನ್ನೇ ಕೇಂದ್ರೀಕರಿಸಿಕೊಂಡಿದೆ. ವಚನ ಚಳವಳಿಯ ಮಿತಿಗಳನ್ನು ನಾವಿಂದು ಗುರುತಿಸಬಹುದಾದರೂ ಅಂದಿನ ಚಾರಿತ್ರಿಕ ಸಂದರ್ಭದಲ್ಲಿ ಮನುಷ್ಯನಿಗೆ ಘನತೆ ತರಲು ಪ್ರಯತ್ನಿಸಿದ ಒಂದು 'ಧಾರ್ಮಿಕ' ವೇದಿಕೆಯಾಗಿ ಅದು ಉಲ್ಲೇಖನೀಯವಾಗಿದೆ.

ಹರಿಹರನ ಕಥಾನಾಯಕರ ಆಯ್ಕೆಯಲ್ಲೇ ಆತನ ಮನುಷ್ಯನ ಕಲ್ಪನೆಯನ್ನು ಗುರುತಿಸಬಹುದು. ಶಿವಭಕ್ತಿಯೇ ಶ್ರೇಷ್ಠವಾಗಿ ಸಾಮಾನ್ಯ ಮನುಷ್ಯನೂ ಕಾವ್ಯ ನಾಯಕನಾದದ್ದು ಹರಿಹರನಲ್ಲಿ. ವಚನ ಚಳವಳಿ—ಸಾಹಿತ್ಯಗಳ ಹಿನ್ನೆಲೆ ಪಡೆದಿದ್ದ ಹರಿಹರನ ಸಾಹಿತ್ಯ ತನ್ಮಯಶೀಲ ಭಕ್ತಿ ಮತ್ತು ಶಿವಸ್ತೋತ್ರದಲ್ಲಿ ಮನುಷ್ಯನ ಸಾರ್ಥಕತೆಯನ್ನು ಕಂಡುಕೊಂಡಿದೆ. ಇಲ್ಲಿ ಭಕ್ತಿಗೆ, ಮನಸ್ಸು ಮುಖ್ಯವೇ ಹೊರತು ವಿಧಿ ವಿಧಾನಗಳಲ್ಲ. (ಇದು ಬೇಡರಕಣ್ಣಪ್ಪನ ರಗಳೆಯಲ್ಲಿ ಸಮರ್ಥವಾಗಿ ಧ್ವನಿತವಾಗಿದೆ).

ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ 'ರಾಜತ್ವ' ಲಯವಾಗಿ 'ಮನುಷ್ಯತ್ವ' ಮಾತ್ರ ಮುಖ್ಯವಾಗುವ ಶೋಧನಾತ್ಮಕ ಕ್ರಿಯೆಯಿದೆ. ಹರಿಶ್ಚಂದ್ರನಿಗೆ ರಾಜತ್ವದ ಕಾರಣಕ್ಕಾಗಿ ದಕ್ಕಿದ ಸಂಪತ್ತು ಕೈತಪ್ಪುವುದರ ಜೊತೆಗೆ, ಸಾಮಾಜಿಕ ಹಮ್ಮು ಬಿಮ್ಮು

ಗಳು ದಿನ ದಿನವೂ ನಾಶವಾಗುವ ಅನಿವಾರ್ಯ ಪ್ರಕ್ರಿಯೆಯೊಂದು 'ಹರಿಶ್ಚಂದ್ರ ಕಾವ್ಯ' ದಲ್ಲಿದೆ. ಹೊಲತಿಯರನ್ನು ನಿರಾಕರಿಸುವಾಗ ಇದ್ದ ವರ್ಣ ವ್ಯವಸ್ಥೆಯ ಅಹಂಕಾರ, ಅಂತ್ಯಜನ ಸೇವೆ ಮಾಡುವ ಹಂತದಲ್ಲಿ ನಾಶವಾಗಬೇಕಾದ ಸ್ಥಿತಿ ನಿರ್ಮಾಣವಾಗುತ್ತದೆ. "ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು" ಎಂಬ ತಾತ್ವಿಕ ಸಮೀಕರಣ ಮಾಡುವ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ, ಹರಿಶ್ಚಂದ್ರನಿಗೆ ಆಗುವ ಶಿವ ಸಾಕ್ಷಾತ್ಕಾರ ಸತ್ಯ ಸಾಕ್ಷಾತ್ಕಾರವಾಗುತ್ತದೆ. ಈ ಸತ್ಯ ಸಾಕ್ಷಾತ್ಕಾರವಾಗುವ ವೇಳೆಗೆ ಹರಿಶ್ಚಂದ್ರ 'ಪ್ರಭು'ವಾಗಿರುವುದಿಲ್ಲ ; ಹೊಲತಿಯರನ್ನು ನಿರಾಕರಿಸುವುದಕ್ಕೆ ಕಾರಣವಾದ ವರ್ಣವ್ಯವಸ್ಥೆಯ ವಾಸನೆಯಿರುವುದಿಲ್ಲ ; ಇದರ ಬದಲು ಸಾಮಾಜಿಕ ಮತ್ತು ಆರ್ಥಿಕ "ಔನ್ನತ್ಯ"ವನ್ನು ತಂದುಕೊಟ್ಟ-ವ್ಯವಸ್ಥೆಯ ವಿಷಮಾಂಶಗಳನ್ನು ಕೊಡವಿಕೊಂಡು ದಟ್ಟ ಜೀವನಾನುಭವದಲ್ಲಿ ಮನುಷ್ಯಮಾತ್ರನಾದ ಹರಿಶ್ಚಂದ್ರನನ್ನು ನಾವು ಕಾಣುತ್ತೇವೆ. ಆದ್ದರಿಂದ, ಸಿಂಹಾಸನದಿಂದ ಇಳಿದು, ಕಾಡು ಮೇಡುಗಳನ್ನು ಅಲೆದು 'ಅಂತ್ಯಜ'ನಲ್ಲಿ ನೆಲ ಮುಟ್ಟುವ ಬೆಳವಣಿಗೆಯ ಬದುಕಿನ ಶೋಧನೆಯಲ್ಲಿ ಒದಗಿದ 'ಕೇವಲ ಮನುಷ್ಯನ' ನೆಲೆಯಾಗಿದೆ. 'ಸಿದ್ಧರಾಮ ಚರಿತೆ'ಯಲ್ಲಿ ಇನ್ನೊಂದು ರೀತಿಯ ಶೋಧನಾತ್ಮಕತೆಯಿದೆ. ಇದನ್ನು ಮುಗ್ಧ ಭಕ್ತಿಯ ಶಿವಶೋಧನೆ ಎನ್ನಬಹುದು. ಆದರೆ ರಾಘವಾಂಕನ ಉಳಿದ ಕಾವ್ಯಗಳಲ್ಲಿ ವೀರಶೈವವೇ ವಿಜೃಂಭಿಸುವುದೊಂದು ವಿಪರ್ಯಾಸ.

ದಾಸ ಸಾಹಿತ್ಯದ ಆಶಯದಂತೆ 'ಹರಿ-ದಾಸ'ನಾಗುವುದರಲ್ಲಿ ಮನುಷ್ಯನ ಮಹತ್ವ ಅಡಗಿದೆ. ಮಾನವರೆಲ್ಲ ಹರಿಯ ದಾಸರೆಂದು ನಂಬುವ ಕೀರ್ತನಕಾರರು ಹರಿಯ ಮೊದಲ ದಾಸಿ ಆತನ ಪತ್ನಿಯಾದ ಲಕ್ಷ್ಮಿಯೆಂದು ನಂಬುತ್ತಾರೆ. ವಚನ ಸಾಹಿತ್ಯದ 'ಮನುಷ್ಯ' ಸಾಮಾಜಿಕ ತಲ್ಲಣವನ್ನುಂಟು ಮಾಡುತ್ತ ರೂಪುಗೊಂಡರೆ, ದಾಸ ಸಾಹಿತ್ಯದ ಮನುಷ್ಯ ಸುಧಾರಣಾ ನೆಲೆಯಲ್ಲಿ ಸಮಾಧಾನ ಸ್ಥಿತಿಯಲ್ಲಿ ರೂಪುಗೊಳ್ಳುತ್ತಾನೆ. ಆದರೆ ಕನಕದಾಸರ 'ರಾಮಧಾನ್ಯ ಚರಿತೆ' ತನ್ನ ಆಶಯದ ದೃಷ್ಟಿಯಿಂದ ಒಂದು ವಿಶಿಷ್ಟ ಕಾವ್ಯವಾಗಿದೆ ಅಕ್ಕಿ ಮತ್ತು ರಾಗಿಯ ನಡುವೆ ನಡೆಯುವ ವಾದ-ವಿವಾದ, ನಮ್ಮ ಸಮಾಜದ ವರ್ಗ ವ್ಯತ್ಯಾಸಗಳನ್ನು ಸಾಂಕೇತಿಕವಾಗಿ ಪ್ರತಿನಿಧಿಸುತ್ತದೆ. ಕಡೆಗೆ ಶ್ರೀರಾಮನಿಂದ ರಾಗಿಯೇ ಶ್ರೇಷ್ಠವೆಂಬ 'ತೀರ್ಪು' ಹೊರಡುವುದೂ ಅರ್ಥಪೂರ್ಣವಾಗಿದೆ. ಜನರ ದೃಷ್ಟಿಯಲ್ಲಿ ಆದರ್ಶಗಳ ಪ್ರತೀಕವಾದ ಶ್ರೀರಾಮ, ರಾಗಿಯನ್ನು ಶ್ರೇಷ್ಠವೆಂದು ಸಾರುವುದು ಕೆಳವರ್ಗಕ್ಕೆ ಸಂದ ಮನ್ನಣೆಯೆಂಬ ಸಾಂಕೇತಿಕಾರ್ಥವನ್ನು ಪಡೆದು ಗಟ್ಟಿ ಮನುಷ್ಯನ ನೆಲೆ ಧ್ವನಿತವಾಗುತ್ತದೆ.

ಆಧುನಿಕ ಸಾಹಿತ್ಯದ ವೈವಿಧ್ಯಮಯ ವಿಸ್ತಾರದಲ್ಲಿ ಒಂದೇ ಸೂತ್ರಕ್ಕೆ ಎಲ್ಲವನ್ನೂ ಒಳಪಡಿಸುವುದು ಅಸಾಧ್ಯ ಮತ್ತು ಅಸಾಧು ಎನಿಸಿದರೂ ಪ್ರಧಾನವಾಗಿ ನಮ್ಮೆಲ್ಲ ಸಾಹಿತ್ಯದ ಮುಖ್ಯ ಗುರಿ ಮನುಷ್ಯನ ಹುಡುಕಾಟವೇ ಆಗಿದೆ. ಆಯಾಯ ಸಂದರ್ಭ

ದಲ್ಲಿ ಸಾಹಿತಿ ಕಂಡುಕೊಳ್ಳಬಯಸುವ ಆದರ್ಶ ಮಾನವನ ರೂಪರೇಖೆಗಳ ಹಿನ್ನೆಲೆ ಬದುಕಿನ ಶೋಧನೆ ನಡೆಯುತ್ತದೆ. ಈ ಮಾತನ್ನು ಎಲ್ಲಾ ಕಾಲಕ್ಕೂ ಅನ್ವ ಬಹುದು.

ನವೋದಯ ಸಾಹಿತ್ಯಸಂದರ್ಭದಲ್ಲಿ ಎದ್ದು ಕಂಡ ರಾಷ್ಟ್ರೀಯತೆ, ಉಪರಾಷ್ಟ್ರೀಯತೆ, ನಿಸರ್ಗ ಪ್ರೇಮಗಳೊಂದಿಗೆ. ಬೇಂದ್ರೆ, ಕುವೆಂಪು. ಕಾರಂತರಂಥ ಕವಿ-ಸಾಹಿಗಳು ಕಂಡು ಕಂಡರಿಸಿದ ಸಾಮಾಜಿಕ ದುರಂತಗಳು ಒಟ್ಟಾರೆ ಅಂದಿನ ಮನುಷ್ಯನ ನೇಯನ್ನೇ ಸೂಚಿಸುತ್ತವೆ. ಬೇಂದ್ರೆಯವರಲ್ಲಿ ನೆಲದಿಂದ ಪುಟಿದೆದ್ದು ಪ್ರತಿಕ್ರಿಯಾಶೀಲನಾಗುವ 'ಮನುಷ್ಯ' ವೈಧವ್ಯ, ಬಡತನಗಳಂಥ ಸಾಮಾಜಿಕ ದುರಂತಗಳನ್ನು ಕಾಣುತ್ತಲೇ ಮಾನವೀಯ ಸಂಬಂಧಗಳ ಸಖೀಗೀತ ಹಾಡುತ್ತ ಆಧ್ಯಾತ್ಮದ 'ನಾಕು ತಂತಿ'ಯನ್ನು ಮೀಟುತ್ತಾನೆ. ಕುವೆಂಪು ಅವರ 'ಮನುಷ್ಯ' ಇಲ್ಲಿರುವ ಜಾತಿ ಪದ್ಧತಿಯನ್ನು ಜರೆಯುತ್ತ ಸಮಾಜ ಬದಲಾವಣೆಗೆ ತುಡಿಯುತ್ತ, ಸಾಮಾಜಿಕ-ಆರ್ಥಿಕ ವೈಷಮ್ಯಗಳಿಗೆ ಸಿಡಿಯುತ್ತ, ನಿಸರ್ಗದಲ್ಲಿ ತನ್ಮಯನಾಗುತ್ತ, 'ಶ್ರೀ ರಾಮಾಯಣ ದರ್ಶನ'ದ ದಾರ್ಶನಿಕನಾಗುತ್ತಾನೆ. ಹೀಗೆ ಏಕಕಾಲದಲ್ಲಿ ವೈರುಧ್ಯಗಳ ನಡುವೆ ಬದುಕುವ 'ಮನುಷ್ಯ' ಇವರಿಬ್ಬರಲ್ಲಿ ರೂಪಧಾರಣೆ ಮಾಡಿದರೆ, ಶಿವರಾಮ ಕಾರಂತರಲ್ಲಿ ನಿಸರ್ಗದೊಂದಿಗೆ ಹೋರಾಟ ಮತ್ತು ಹೊಂದಾಣಿಕೆಗಳನ್ನು ಸಾಧಿಸುವ 'ಮನುಷ್ಯ'ನನ್ನು ಕಾಣುತ್ತೇವೆ. ಇವರಲ್ಲಿ ನಿಸರ್ಗಕ್ಕೆ ಒಪ್ಪಿಸಿಕೊಂಡು ಬದುಕುವ ಮತ್ತು ನಿಸರ್ಗವನ್ನು ಒಗ್ಗಿಸಿಕೊಂಡು ಬದುಕುವ 'ಮನುಷ್ಯ'ರಿಬ್ಬರೂ ಕಾಣಸಿಗುತ್ತಾರೆ.

ನವ್ಯ ಸಾಹಿತ್ಯ ಹೊಸ ಭಾಷೆ-ಬಂಧಗಳನ್ನು ರೂಢಿಸಿಕೊಳ್ಳುವ ಕ್ರಮದಲ್ಲೇ ಹೊಸ ಮನುಷ್ಯನನ್ನು ರೂಪಿಸಿಕೊಳ್ಳಲು ಯತ್ನಿಸಿದೆ. ಮನುಷ್ಯ ಸಂಬಂಧದ ಮಡಿವಂತಿಕೆಯನ್ನು ಮೆಟ್ಟಿ, ಮನುಷ್ಯನ ಮನಸ್ಸಿನ ಸೂಕ್ಷ್ಮಾತಿಸೂಕ್ಷ್ಮಗಳನ್ನು, ಸುಪ್ತ ಸ್ವಭಾವ ಕಾಮನೆಗಳನ್ನು ಶೋಧಿಸುತ್ತ, ಸಂಗತ, ಅಸಂಗತ ವ್ಯಕ್ತಿತ್ವಗಳನ್ನು ಹುಟ್ಟಿಸಿದೆ. ಇಲ್ಲಿರುವ ಮನುಷ್ಯ ಪ್ರಧಾನವಾಗಿ ಯಂತ್ರಯುಗದ ಪ್ರಭಾವದಲ್ಲಿ ರೂಪುಗೊಂಡ ಬೌದ್ಧಿಕ ಅಂತರ್ಮುಖಿ ಮತ್ತು ಮೇಲ್ ಮಧ್ಯಮವರ್ಗದ ಪ್ರತಿನಿಧಿ.

ಬಂಡಾಯ ಸಾಹಿತ್ಯ ಕಾಣಬಯಸುವ ಆದರ್ಶ ಮನುಷ್ಯ, ಸಮಾನತೆಗಾಗಿ ತುಡಿಯುತ್ತ, ಮಣ್ಣಿನ ಕಣ ಕಣವನ್ನೂ ಕರುಳು ಕಣ್ಣುಗಳಲ್ಲಿ ತುಂಬಿಕೊಂಡು ಸಿಡಿಯುವ ಮಾನವತಾವಾದಿ. ಈ ಮನುಷ್ಯನಲ್ಲಿ ಅಸಹಾಯಕತೆಯಿದೆ ; ಆಕ್ರೋಶವಿದೆ ; ನೋವಿನಿಂದ ನಲುಗಿದ ಮನಸ್ಸಿದೆ ; ಜೊತೆಗೆ ಅಂತರಂಗ ಬಹಿರಂಗಗಳನ್ನೊಂದು ಮಾಡುವ ಹಂಬಲವಿದೆ. ಇಂಥ ಹಂಬಲದ ಮುಖ್ಯ ಮನೋಧರ್ಮ ಬಂಡಾಯವಾಗಿದೆ. ಈ 'ಬಂಡಾಯ ಮನುಷ್ಯ' ಚಾರಿತ್ರಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸಿ ಸ್ಫೋಟಗೊಳ್ಳುತ್ತಿದ್ದಾನೆ ; ಬೆಳೆಯುತ್ತಿದ್ದಾನೆ.

# ವ್ಯತ್ಯಯ

ವಲಸೆ ಹೊರಟಿವೆ ಪಾರಿವಾಳಗಳರ ಮನೆಯಿಂದ
ಬಾನಲ್ಲಿ ಹದ್ದುಗಳ ಗಸ್ತು ನಿಂತಿಲ್ಲ
ಕತ್ತಲೆಯ ಗೂಡಿನಲಿ ಕಾಣೆ ಗಿಡುಗಗಳಿಲ್ಲ
ಹರಡಿ ಕಾದಿವೆ ರೆಕ್ಕೆ ಬಾನ ತುಂಬ

ಖಾಲಿಯಾಗಿದೆ ಅರಮನೆಯ ಪಂಜರ
ಕಿರುಗುಡುತ್ತ ಅರಸರ ಖಯಾಲಿಗೆ
ಕೆರಳಿಸಿವೆ ಅಲ್ಲಲ್ಲಿ ಬಿದ್ದ ರೆಕ್ಕೆಯನಾಯ್ದು
ಪಂಜರವ ತುಂಬಿಸುವ ಹುಚ್ಚು ರತಿಯು

* * *

ಕಾಡುತ್ತ ಹೊರಬಂದೇ ಕದಡಿತ್ತು ಶಾಂತಿ
ಬಿಳಿ ಪಾರಿವಾಳ ಬಲೆಗೆ ಸಿಕ್ಕಿದಲ್ಲೆ ಅಂದೇ
ಗುರಿ ಹಿಡಿದು ನಿಂತವರು ಚಪ್ಪಾಳೆ ತಟ್ಟಿದರು
ಹೊಕ್ಕು ಬಾಣವು ಎದೆಯ ಸೀಳಿದಾಗ

ಮತ್ತೊಮ್ಮೆ ಕೇಳಿಸಿತು ಪಕ್ಷಿಯಾ ಕ್ರಂದನವು
ಅಲ್ಲೇ ಅದೇ ಸಂದಣಿಯ ನಡುವಿನಲ್ಲೇ
ಕಡಿದ ಹತ್ತೂ ತಲೆಯು ನಕ್ಕುಬಿಟ್ಟವು ಒಮ್ಮೆ
ಕಿಡಿಯು ತಗುಲಿದ ರೆಕ್ಕೆ ಸಿಡಿಯುವಾಗ

* * *

ವಲಸೆ ಹೊರಟಿದ್ದ ಪಾರಿವಾಳಗಳ ಹಿಂದೆ
ಹೊರಟಿವೆ ಗಿಡುಗ, ಹದ್ದುಗಳ ಮಂದೆ
ಮೇಲೆ ಹಾರಲು ಚೂಪು ಕೊಕ್ಕಿಗೆ ಹಣ್ಣು
ಕೆಳಗೆ ಬೇಡನು ಗುರಿಯಿಟ್ಟ ಬಿಲ್ಲು

ಹೆಪ್ಪುಗಟ್ಟಿದೆ ಬಸಿರು ಮಾನಭಯದಲಿ ಇಂದು
ಬಿಡುಗಡೆಯ ಆನಂದ ತರಗು ತರಗು
ಬೆಳಕು ಮೂಡಲೆ ಇಲ್ಲ ಮೋಡ ಕರಗಲೆ ಇಲ್ಲ
ಬಾನಲ್ಲೂ ಅವಕೆ ರವಿಯದೇ ನೆನಪು

* * *

---

ಸ್ವಾಮಿನಾಥ, ಗೌನಿಪಲ್ಲಿ, ಶ್ರೀನಿವಾಸಪುರ (ತಾ) ಕೋಲಾರ ಜಿಲ್ಲೆ.

ಹಾರುತಿವೆ ಮರೆಯಲ್ಲಿ ನಾಳಿನಾ ಚಿಂತೆಯಲಿ
ಕಾಣುತ್ತಿದೆ ಆಲ ಅಂಗೈಯಗಲ
ಭೂಮಿ ಎಲ್ಲ ಬಿಳುಪು ಬೀಜು ಕಟ್ಟಿದ ನುಣುಪು
ರಕ್ತ ಸಾಗರ ಮೇಲೆ ನೊರಜು ಬುರುಗು

ಎಲ್ಲ ದಿಕ್ಕುಗಳಲ್ಲಿ ಚೆಲ್ಲಿ ಹರಡಿವೆಯಲ್ಲ
ಪಾರಿವಾಳದ ಬಿಳಿಯ ರೆಕ್ಕೆಪುಕ್ಕ
ನೋಡಿ ಬೆವೆತಿಹ ಹಕ್ಕಿ ಹಿಂಡು ನಡುಗುತ್ತಿದೆ
ಮುಂದೆ ಕಾಣುವ ಹಾದಿ ಘೋರ ನರಕ

* * *

ವಲಸೆ ಹೊರಟಿದ ಪಾರಿವಾಳಗಳೆಲ್ಲ
ಹಾರುತಿವೆ ಮತ್ತೆ ಅರಮನೆಯೆಡೆಗೆ
ಪಂಜರದಿ ನುಗ್ಗುತಿವೆ ಬಂಧನವ ಬೇಡುತಿವೆ
ಅರಸರೆಸೆಯುವ ಹಿಡಿ ಕಾಳು–ನೀರಿಗೆ

ಕಟಕಟೆಯ ಮನೆಯಲ್ಲಿ ಜೀವಭಯವೇನಿಲ್ಲ
ಹೊಟ್ಟೆ ಬಟ್ಟೆಯ ಚಿಂತೆ ಇಲ್ಲಿ ಇಲ್ಲ
ಅರಸರಿಗೆ ಪಲ್ಲಂಗ ಹಾಸಿ ತೂಗಿದರಾಯ್ತು
ಬದುಕಿರಲು ಇದು ಸಾಕು ಮತ್ತೇನು ಬೇಕು ?

—ಸ್ವಾಮಿನಾಥ

# ಯಾತ್ರೆ

ಟೆಲಿಸ್ಕೋಪಿನ ನಳಿಗೆಯಲ್ಲಿ ಕೂತು ನಭಕ್ಕೆ ಹೊಡೆದೆ
ಚಂದ್ರನ ಮುಖಕ್ಕೆ ಮುಖವುಜ್ಜಿದೆ, ನೆಕ್ಕಿ ಅಣಕಿಸಿದೆ.
ತಾರೆಗಳ ಮುಟ್ಟಿ ಕೈಸುಟ್ಟುಕೊಂಡೆ–ಹಾಯ್, ಕಾದ ರಸದ
ಬಿಂದುಗಳವು ! ನಿರ್ಮಾಯದಲ್ಲೀ ಸಾಕಿ
ಕುಸಿದೆ–ಪಲ್ಟಿ ಹಾಕಿದೆ–ತೇಲಿ
ವ ರಳಿದೆ.

ಎಸ್. ಮಂಜುನಾಥ್, 2/48, II ಅರ್ಕನಾಥ ರಸ್ತೆ, ಕೆ. ಆರ್. ನಗರ-571 602

ಈಗ ರಕ್ತದಲ್ಲೊಂದಷ್ಟು ಮತಾಪು ನಕ್ಷತ್ರಗಳು ಹೂ
ಉರಿದುದುರುತ್ತಿವೆ.
ಮಜ್ಜೆಯೊಳಗಷ್ಟಿಷ್ಟು ತಿಂಗಳ ಬೆಳಕಿನ ಕೆನೆ ಮೋಡ
ಮಡಗಿದ್ದೇನೆ.
ಗವ್ ಗತ್ತಲಲ್ಲಿ ಗವಿಮೌನದಲ್ಲಿ ಫ್ಲಡ್‌ಲೈಟ್ ಸೂರ್ಯ
ಎದೆಯೊಳಗೆ ಹತ್ತಿ ಮುದುರುತ್ತಾನೆ.

—ಎಸ್. ಮಂಜುನಾಥ್

## ಹಾವು ಬಂತು ಹಾವು ಬಂತು ಹಾವು

ಹಾವು ಬಂತು ಹಾವು ಬಂತು ಹಾವು
ಹೆದರಿ ಓಡಿತಲ್ಲೋ ಅತ್ತ ಬದಿಗೆ ಸಾವು.

ಗೆಲ್ಲುವಂತ ಹಾವು ಎದ್ದು ನಿಲ್ಲುವಂತ ಹಾವು
ಹೊಡೆಯುವಂತ ಹಾವು ಅಲ್ಲ, ಕಡಿಯುವಂತ ಹಾವು ಅಲ್ಲ
ಮೆಚ್ಚುವಂತ ಹಾವು, ಬಿಚ್ಚಿ ನಿಲ್ಲುವ ಹಾವು
ಹಾವು ಬಂತು ಹಾವು ಬಂತು ಹಾವು
ಹೆದರಿ ಓಡಿತಲ್ಲೋ ಅತ್ತ ಬದಿಗೆ ಸಾವು

ಹುತ್ತವಿಲ್ಲ ಮುತ್ತದಕೆ ಇಲ್ಲ ಬಾಲ
ಹಸಿವು ಹಸಿವು ಎಂಥ ಕಸವು
ಮಾವು ಬೇವು ಬೆಲ್ಲ ಉಪ್ಪು ಹುಳಿಯ ಬಲ್ಲ ಹಾವು
ಹಾವು ಬಂತು ಹಾವು ಬಂತು ಹಾವು
ಹೆದರಿ ಓಡಿತಲ್ಲೋ ಅತ್ತ ಬದಿಗೆ ಸಾವು.

ಕಾವು ತಂದು ನೋವು ಕೊಂದು
ಒಳಗೆ ಒಳಗೆ ನುಗ್ಗುವಂತ ಹಾವು
ಹಾವು ಬಂತು ಹಾವು ಬಂತು ಹಾವು
ಹೆದರಿ ಓಡಿತಲ್ಲೋ ಅತ್ತ ಬದಿಗೆ ಸಾವು

ಹರಿದ ಹಾವು ಅಲ್ಲವಯ್ಯ, ಮುರಿವ ಹಾವು ಅಲ್ಲವಯ್ಯ
ಜೀವ ತರುವ ಹಾವು
ಹಾವು ಬಂತು ಹಾವು ಬಂತು ಹಾವು
ಹೆದರಿ ಓಡಿತಲ್ಲೋ ಅತ್ತ ಬದಿಗೆ ಸಾವು.

— ಬಂದಗದ್ದೆ ರಾಧಾಕೃಷ್ಣ

ಬಂದಗದ್ದೆ ರಾಧಾಕೃಷ್ಣ, ಬಂದಗದ್ದೆ, ಕೆಳದಿ ಅಂಚೆ, ಸಾಗರ (ತಾ), ಶಿವಮೊಗ್ಗ ಜಿಲ್ಲೆ

# ಲಿಮರಿಕ್ ಗಳು

೧ ತಾನು ಬರೆದುದೆಲ್ಲವೂ ಕವಿತೆ
ಎನುವುದೊಂದೆ ಕವಿಯ ಘನತೆ
ಆದಿ–ಅಂತ್ಯ ಪ್ರಾಸ
ಉಳಿಸುವುದೆ ತ್ರಾಸ
ಸ್ಪಷ್ಟವಾಗಿದೆ ಇಲ್ಲಿ ಕವಿತ್ವದ ಕೊರತೆ.

೨ ಕವಿಮಾತಿದು ಎಲ್ಲ ಮಂದಿಗೂ
ಅದು ನಿತ್ಯ ನೂತನ ಇಂದಿಗೂ
ಕಳೆದ ಹೊತ್ತು
ಬಿಡೆದ ಮುತ್ತು
ಮರಳಿ ದೊರಕದು ಎಂದಿಗೂ.

೩ ಹೊಳೆವ ಕಂಗಳ ಹುಡುಗಿ ಹೆಸರ ಹೇಳಿತು–ದೀಪ
'ತನ್ನ ಮನೆ ಬೆಳಕಾಗೆಂ'ದು ಮದುವೆಯಾದನು ಭೂಪ
ಇರುಳು ಮುಸುಕೆ ನಡುಗತ್ತಲು
ಇವಳು ಹೆಣ್ಣು–ಕಣ್ಣು ಮುಚ್ಚಲು
ಹೇಳತೀರದು ಈಗವನ ಪರಿತಾಪ–ಪಾಪ!

— ರಾಮಚಂದ್ರ ಪೈ

ಆರ್. ರಾಮಚಂದ್ರ ಪೈ. 19-2, 'ನಿಶಾಂತ್', ರೇಂಜ್ ಫಾರೆಸ್ಟ್ ಆಫೀಸ್ ಬಳಿ, ಮೂಡುಬಿದಿರೆ-574227.

# ಹಿಮಾಲಯವನ್ನು ಬಣ್ಣಿಸಿದ ವರ್ಣಶಿಲ್ಪಿ ರೋರಿಚ್

—ಪಿ. ಆರ್. ತಿಪ್ಪೇಸ್ವಾಮಿ

ಭಾರತಕ್ಕೆ ಸಂಬಂಧಪಟ್ಟಂತೆ ನೆನೆಯುವ ರಷ್ಯಾದ ಪ್ರಸಿದ್ಧ ಹೆಸರುಗಳಲ್ಲಿ ಮಹಾ ಕಲಾವಿದ ನಿಕೊಲಾಸ್ ರೋರಿಚ್ಚನ ಹೆಸರು ಪ್ರಥಮ ಶ್ರೇಣಿಯಲ್ಲಿ ನಿಲ್ಲುತ್ತದೆ. ಭಾರತ ರಷ್ಯಾಗಳ ಬಾಂಧವ್ಯ ಸೂಚಕ ವಾರ್ಷಿಕ ಸಂಚಿಕೆಗಳಲ್ಲಿ ಈ ಸಂಬಂಧಕ್ಕೆ ಮೂಲ ಕಾರಣ ರಾದ ಕೆಲವು ಹೆಸರುಗಳು ಬರುತ್ತವೆ. ಅವನಾಸಿ ನಿಕಟಿನ್, ಜರಾಸಿಮ್ ವ್ಯಾಬೆಡ್ಸ್, ಪ್ಯೊಡರ್ ಸ್ಕೇರ್‌ಬಟ್ ಸ್ಕಾಯ್ ಮುಂತಾದ ಖ್ಯಾತ ನಾಮದ ಜೊತೆಯಲ್ಲಿ ರೋರಿಚ್ಚನ ಹೆಸರನ್ನು ಸೇರಿಸುವುದರಲ್ಲಿ ಅಭ್ಯಂತರವಿಲ್ಲ. ಈ ಮಹನೀಯರು ಭಾರತ ವನ್ನು ರಷ್ಯಾಕ್ಕೆ ಆರಂಭದಲ್ಲೇ ಪರಿಚಯಿಸಿದರು. ಭಾರತದ ಹೃದಯವನ್ನು ಅವರ ಮುಂದೆ ತೆರೆದಿಟ್ಟರು.

ತನ್ನ ಬಾಲ್ಯವನ್ನು ರೋರಿಚ್ ರಷ್ಯಾದ ಪುರಾತನ ನಗರವಾದ ನವಾಗ್ರಾಡ್‌ನಲ್ಲಿ ಕಳೆದನು. ತನ್ನ ಅಂತ್ಯ ದಿನಗಳಲ್ಲಿ ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಭಾರತದ ಹಿಮಾಲಯ ಪ್ರದೇಶದಲ್ಲಿ ಕಳೆದನು. ಪಶ್ಚಿಮ ಪಂಜಾಬಿನ ಕುಲುವಿನಲ್ಲಿದ್ದ ಸಾಧಾರಣ ವಾದ ನಿರಾಡಂಬರವಾದ ಗೃಹವೊಂದು ಅಲ್ಲಿ ಅವನ ನಿವಾಸಸ್ಥಾನವಾಗಿದ್ದಿತು. ಹಿಮ ಮತ್ ಕಿರೀಟಗಳಿಂದ ಕಂಗೊಳಿಸುತ್ತಿದ್ದ ಪರ್ವತ ಶ್ರೇಣಿ ಆ ಕಲಾಭಿಜ್ಞನ ಕುಂಚಕ್ಕೆ ಹಬ್ಬವನ್ನುಂಟುಮಾಡಿತು. ಆ ನೆಲೆಯಲ್ಲಿಯೇ ಆ ಕಲಾಯೋಗಿ ತನ್ನ ಅಂತ್ಯ ಸಮಾಧಿ ಯನ್ನು ಹೊಂದಿದನು. ಉಳಿದ ಆತನ ನೂರಾರು ವರ್ಣ ಚಿತ್ರಗಳ ಕ್ಯಾನುವಾಸು ಗಳನ್ನು ಇತ್ತೀಚೆಗೆ ರಷ್ಯಾಕ್ಕೆ ತರಲಾಯಿತು. ತನ್ನ ಜೀವನದಲ್ಲಿ ಮತ್ತೊಮ್ಮೆ ತಾಯಿ ನೆಲಕ್ಕೆ ಮರಳಬೇಕೆಂಬ ಅವನ ಉತ್ಕಟೇಚ್ಛೆ ಕೊನೆಗೂ ನೆರವೇರಲಿಲ್ಲ.

ರೋರಿಚ್ ಹಿಮಾಲಯದ ಸೌಂದರ್ಯಾರಾಧಕನಾಗುವ ಮೊದಲು, ನವಾ ಗ್ರಾಡ್‌ನ್ನು ತೊರೆದು ಹೆಚ್ಚಾಗಿ ಇಟಲಿ, ಫ್ರಾನ್ಸ್ ಮುಂತಾದ ಪ್ರದೇಶಗಳಲ್ಲಿ ಪ್ರವಾಸ ಮಾಡಿ ಬಂದಿದ್ದನು. ಇಂಗ್ಲೆಂಡ್ ಮತ್ತು ಅಮೇರಿಕಗಳಲ್ಲಿ ಕೆಲವು ಕಾಲ ನೆಲಸಿಯೂ ಬಂದಿದ್ದನು. ಈ ತನ್ನ ಮಧ್ಯಮ ವಯಸ್ಸಿನಲ್ಲಿ ಅವನು ರಚಿಸಿರುವ ಕಲಾಕೃತಿಗಳು

ಪಿ. ಆರ್. ತಿಪ್ಪೇಸ್ವಾಮಿ, 173, ಆರ್. ವಿ. ರಸ್ತೆ, ಮೈಸೂರು-570 001

ಅದ್ವಿತೀಯವಾದುವೆಂದೇ ಹೇಳಬೇಕು. ವಿಶ್ವದ ವರ್ಣಶಿಲ್ಪಿಗಳ ಇತಿಹಾಸದಲ್ಲಿ ಅಪೂರ್ವ ಸೌಂದರ್ಯಾರಾಧಕನೆಂಬ ಖ್ಯಾತಿಗೆ ಅವನು ಪಾತ್ರನಾಗುತ್ತಾನೆ. ಹಿಮಾಲಯ ಪ್ರದೇಶ, ಮಂಗೋಲಿಯ, ರಷ್ಯಾಗಳಲ್ಲಿನ ನೈಸರ್ಗಿಕ ದೃಶ್ಯಗಳು ಅವನನ್ನು ಈ ಕೀರ್ತಿಗೆ ಪಕ್ಕಾಗಿಸಿವೆ.

ರೋರಿಚ್ಚನ ಕಲಾಕೃತಿಗಳು ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಪ್ರಕಟಗೊಂಡು ತಮ್ಮ ಸಹಜ ಸೌಂದರ್ಯದಿಂದ ಸಮಕಾಲೀನ ಕಲಾರಾಧಕರನ್ನು ಸೋಜಿಗಪಡಿಸಿದುವು. ರೋರಿಚ್, ರಷ್ಯಾದ ಹೆಸರಾಂತ ಕಲಾವಿದ ಆರ್ಕಿಫ್ ಕುಹೀಜಿ ಅವರ ನೇತೃತ್ವದಲ್ಲಿ ಚಿತ್ರಶಾಲೆಯಲ್ಲಿ ಅಭ್ಯಾಸಶೀಲನಾಗಿದ್ದನು. ವರ್ಣಕೌಶಲವನ್ನು ತನ್ನ ಗಡುವಿನಿಂದ ಪಡೆದುದಲ್ಲದೆ, ಕಲಾಕೃತಿಗಳಿಗೆ ಸಜೀವ ಕಾಂತಿಯನ್ನು ತುಂಬುವ ಕೌಶಲವನ್ನೂ ಪ್ರಕೃತಿಯೊಡನೆ ನಿಕಟ ಸಂಬಂಧವನ್ನು ಪಡೆದು, ಬೆಳಕಿನ ವಿಷಯದಲ್ಲಿ ಒಂದು ದೃಷ್ಟಿಯನ್ನು ಸಂಪಾದಿಸಿದ್ದನು. ಇಷ್ಟೇ ಅಲ್ಲದೆ ಪ್ರಾಚೀನ ರಷ್ಯಾದ ಇಕಾನ್ ಕಲಾವಿದರ ಕೃತಿಗಳೂ ಅವನಿಗೆ ಶಿಕ್ಷಕರಾದುವು. ಗುರುವಾದ ಕಹೀಂಜಿನ ವರ್ಣಪ್ರಭೆಯೂ ರಷ್ಯಾದ ಪ್ರಾಚೀನ ಕಲೆಗಾರರ ಭವ್ಯತೆಯೂ ಸೇರಿ ರೋರಿಚ್ಚನದೇ ಆದ ಒಂದು ಶೈಲಿಯೂ ಸಿದ್ಧಿಸಿತು.

ತನ್ನ ಆರಂಭದ ದಿನಗಳಲ್ಲಿ ರೋರಿಚ್ ರಷ್ಯಾದಲ್ಲೆಲ್ಲ ಪ್ರವಾಸ ಮಾಡಿ ಅಲ್ಲಿನ ಶಿಲಾ ಪ್ರತಿಮೆಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾ, ನೋಡಿ ಕಣಿಯುತ್ತ, ದಿನಗಳನ್ನು ಸಾರ್ಥಕಪಡಿಸಿಕೊಂಡನು. ತನ್ನ ಬಾಲ್ಯದಿನಗಳಲ್ಲಿ ಅವನನ್ನು ಆಕರ್ಷಿಸಿದ್ದ ಉತ್ತರದೆಸೆಯ ಚಿತ್ರಮಯ ಪ್ರಕೃತಿಯತ್ತ ದೃಷ್ಟಿಯನ್ನು ಹರಿಸುತ್ತಾ ರೋರಿಚ್ಚನು ಅವುಗಳನ್ನು ತನ್ನ ಕ್ಯಾನುವಾಸಿನ ಮೇಲೆ ಭವ್ಯವಾಗಿ ಬಿಡಿಸಿದನು.

"ಉತ್ತರದ ಕತೆಯು ಆಳವಾದುದು ; ರಮಣೀಯವಾದುದು ; ಉತ್ತರದ ಗಾಳಿಯೆಂದರೆ ಪುಳಕವನ್ನುಂಟುಮಾಡತಕ್ಕದ್ದು, ಅಹ್ಲಾದದಾಯಕವಾದುದು ; ಉತ್ತರದ ಸರೋವರಗಳೆಂದರೆ ಧ್ಯಾನ ಮಗ್ನವಾದುವು; ಉತ್ತರದ ನದಿಗಳು ರಜತ ವರ್ಣದಿಂದ ಕೂಡಿದವು; ದಟ್ಟಡವಿಗಳು ಅಪ್ರತಿಮವಾದುವು ; ಹಸಿರು ಬೆಟ್ಟಗಳು ಬಹು ಅನುಭವಿಗಳು ; ಕಂದು ಶಿಲೆಗಳು ಅನೇಕ ಅದ್ಭುತಗಳಿಂದ ತುಂಬಿದುವು" ಎಂದು ರೋರಿಚ್ಚನೇ ಒಂದು ಕಡೆ ಹೇಳಿದ್ದಾನೆ.

ರೋರಿಚ್ಚನ ಈ ಅದ್ಭುತಗಳನ್ನು ತನ್ನ ಕ್ಯಾನುವಾಸುಗಳಲ್ಲಿ ಹಿಡಿದು ಜನತೆಗೆ ತೋರಿಸಿದನು. ಪ್ರಾಚೀನ ಕಾಲದ ಅನುಭವಗಳೂ ಘಟನೆಗಳೂ ಕಲಾವಿದನ "ಸಾಗರದಾಚೆಯ ಅತಿಥಿಗಳು" ಎಂಬ ವರ್ಣಚಿತ್ರದಲ್ಲಿ ಒಡಮೂಡಿದೆ. "ವಸಂತ" ಎಂಬ ಕಲಾಕೃತಿಯಲ್ಲಿ ಮಾನವ ಹಾಗೂ ಪ್ರಕೃತಿಯ ಬಂಧನದ ಸಾಮರಸ್ಯ ವ್ಯಕ್ತವಾಗಿದೆ. ಮಾನ

ವನು ಯಾರಿಂದಲೂ ತೊಂದರೆಗೊಳ್ಳದಂತೆ ಯಾರನ್ನೂ ನೋವಿಗೀಡು ಮಾಡದಂತೆ, ಸಹೋದರ ಭಾವನೆಯಿಂದ ಇರಲು ಭೋದಿಸುವ ಒಂದು ಗೀತೆಯಂತಿದೆ ಈ ವರ್ಣ ಚಿತ್ರ.

ರಷ್ಯಾದ ಕ್ರಾಂತಿಯಿಂದಾಗಿ ರೋರಿಚ್ ಫಿನ್‌ಲ್ಯಾಂಡಿಗೆ ಬರಬೇಕಾಯಿತು. ರಾಜಕೀಯ ಘಟನೆಗಳು ಅವನನ್ನು ತನ್ನ ಮಾತೃಭೂಮಿಯಿಂದ ದೂರಮಾಡಿದುವು. ಅಲ್ಲಿ ಕಲಾಸೇವೆಗಾಗಿ ತನ್ನನ್ನೇ ಮುಡುಪಾಗಿಟ್ಟನು. ವಿನಾಶದ ಹಾದಿಯಲ್ಲಿ ನಡೆದ ಅಸಂಗತ ಘಟನಾವಳಿಗಳಲ್ಲಿ ಕಲೆಯೊಂದೇ ಸಹಜವಾದುದು, ಅಮರವಾದುದು ಎಂಬುದನ್ನು ಅವನು ಅರಿತುಕೊಂಡ. ಇಂಗ್ಲೆಂಡು, ಅಮೇರಿಕ ಸಂಯುಕ್ತ ಸಂಸ್ಥಾನ, ಸ್ಕಾಂಡಿನೇವಿಯಾ ಮುಂತಾದ ಕಡೆಗಳಲ್ಲಿ ಅವನ ಕಲಾಕೃತಿಗಳ ಪ್ರದರ್ಶನಗಳು ಮತ್ತೆ ಮತ್ತೆ ಏರ್ಪಟ್ಟವು. ನ್ಯೂಯಾರ್ಕಿನಲ್ಲಿ ಅವನು ಅದ್ಭುತ ದಿಗ್ವಿಜಯವನ್ನು ಸಾಧಿಸಿದ. ಆದರೆ ಕಲಾವಿದನ ಪಾಲಿಗೆ ವ್ಯಾಪಾರ ದೃಷ್ಟಿಯು ಕ್ರೂರ ಸಮಾಜ ಹೊಂದಿಕೊಳ್ಳಲಿಲ್ಲ. ಆದ್ದರಿಂದ ಅವನು ತನ್ನನ್ನು ಬಹುದಿನಗಳಿಂದಲೂ ಆಕರ್ಷಿಸಿದ್ದ ಭಾರತಕ್ಕೆ ಆಗಮಿಸಿದನು.

ಭಾರತೀಯ ಸಂಸ್ಕೃತಿಯಲ್ಲಿ ಪ್ರಾಚೀನ ಕಾಲದಿಂದ ಬೆಳೆದು ಬಂದ ಕಲಾಪರಂಪರೆಯನ್ನು ತನಗೆ ಪ್ರೀತಿ ಪಾತ್ರವಾದ ಜೀವಜಂತುಗಳನ್ನು ರೋರಿಚ್ ಇಲ್ಲಿ ಕಂಡನು. ಪ್ರಾಪಂಚಿಕ ಸುಖಗಳನ್ನು ತ್ಯಾಗ ಮಾಡಿದ. ಯಾವ ಧಾಮವನ್ನು ತಾನು ಬಹು ದಿನದಿಂದ ನಿರೀಕ್ಷಿಸಿದ್ದನೋ ಅದನ್ನು ಅವನು ಪಡೆದುಕೊಂಡಂತಾಯಿತು. ಸ್ವರ್ಗದ ಸೋಪಾನದಂತಿದ್ದ ಹಿಮಾಲಯದ ಮಡಿಲಲ್ಲಿ ಉಳಿದುಕೊಂಡು, ತನ್ನ ಸಿದ್ಧಿಯನ್ನು ಸಾಧಿಸಿದ ಅತ್ಯುತ್ಸಾಹಿ ಕಲಾವಿದನಂತೆ ಹಿಮಾಲಯದ ನೈಸರ್ಗಿಕ ಅಂಚುಗಳನ್ನು ಮತ್ತೆ ಮತ್ತೆ ಚಿತ್ರಿಸಿದನು. "ಜೀವನದ ರಹಸ್ಯವೆಲ್ಲಾ ಹಿಮಾಲಯದ ಆ ಪ್ರಸನ್ನತೆಯಲ್ಲಿ ಅಡಗಿದೆ" ಎಂದು ಅವನು ಅರಿತ.

1920 ರಲ್ಲಿ ಲಂಡನ್ನಿನಲ್ಲಿ ಪರಿಚಿತನಾಗಿದ್ದ ವಿಶ್ವಕವಿ ರವೀಂದ್ರನಾಥ ಠಾಕೂರರ ಪರಮ ಮಿತ್ರರಾದರು. ಅಪೂರ್ವ ಮೇಧಾವಿಗಳೆಂದು ಪರಿಗಣಿಸಲ್ಪಟ್ಟ ಅವರಿಬ್ಬರೂ ಪುಸ್ತಕಗಳನ್ನೂ, ಛಾಯಾ ಚಿತ್ರಗಳನ್ನೂ, ಬರಹಗಳನ್ನೂ, ಅಭಿಪ್ರಾಯಗಳನ್ನೂ ಪರಸ್ಪರ ವಿನಿಮಯ ಮಾಡಿಕೊಂಡರು.

ರೋರಿಚ್ ನೆಹರೂರವರಿಗೂ ಅತ್ಯಂತ ಆತ್ಮೀಯ ಮಿತ್ರರಾಗಿದ್ದರು. ನೆಹರೂ ಅವರು ರೋರಿಚ್‌ನ ಕಲಾಕೌಶಲ್ಯವಷ್ಟನ್ನೇ ಮೆಚ್ಚಿರಲಿಲ್ಲ; ಹಿಮಾಲಯದ ಸುತ್ತಣದ ನೆಲೆಗಳನ್ನೆಲ್ಲಾ ಸಂಶೋಧಿಸಿ ಉತ್ತರದ ವಿಷಯದಲ್ಲಿ ಅವನು ಗಳಿಸಿ

ಕೊಂಡಿದ್ದ ಅಪಾರ ಜ್ಞಾನ ಭಂಡಾರವನ್ನು ಮೆಚ್ಚಿಕೊಂಡಿದ್ದರು. ನೆಹರೂ ರವರು ಕುಲುವಿನಲ್ಲಿ "ಕಲೆ, ಇತಿಹಾಸ. ವರ್ತಮಾನ" ವಿಷಯಗಳಲ್ಲಿ ಚರ್ಚೆಗಳನ್ನು ನಡೆಸುತ್ತ ಎರಡು ವಾರಗಳನ್ನು ರೋರಿಚ್‌ರೊಟನೆ ಕಳೆದಿದ್ದರು.

ರೋರಿಚ್ಚ್‌ನಿಗೆ ಯುದ್ಧ ಮತ್ತು ಫ್ಯಾಸಿಜಂಗಳ ಅವಾಂತರ ಮನಶ್ಯಾಂತಿಯನ್ನು ಕದಡುತ್ತಿದ್ದುವು. ಅವನು ಶಾಂತಿಪ್ರಿಯ. ಕಲಾರಾಧಕ. ರಾಷ್ಟ್ರಭಕ್ತನಾಗಿದ್ದ. ಇವುಗಳ ಒಗೆಗೆಲ್ಲಾ ಸಮರಭೀತಿ, ಅಂಜಿಕೆಯನ್ನು ತಂದೊಡ್ಡಿತು. ಐತಿಹಾಸಿಕವಾದ ಹಾಗೂ ಕಲೆಗೆ ಸಂಬಂಧಪಟ್ಟ ಅನೇಕ ಸ್ಮಾರಕಗಳನ್ನು ಉಳಿಸಲು ಸತತವಾಗಿ ಪ್ರಯತ್ನಿಸಿದ. ಯುದ್ಧಕಾಲವಲ್ಲಿ ಸಾಂಸ್ಕೃತಿಕ ಮೌಲ್ಯಗಳ ರಕ್ಷಣೆಗೆ ಅವನು ನಡೆಸಿದ ಹೋರಾಟವು ಮರೆಯುವಂತಹುದಲ್ಲ. ಮಾನವ ಪ್ರತಿಭೆ ಸೃಷ್ಟಿಸಿದ ಎಲ್ಲ ಅಮೂಲ್ಯ ವಸ್ತುಗಳ ರಕ್ಷಣೆಯ ಬಗೆಗ ರೋರಿಚ್ಚನ ಹೊಸ ಚಳುವಳಿ ಶಾಶ್ವತವಾದ ಒಂದು ಎಚ್ಚರಿಕೆಯಾಗಿ ಉಳಿದಿದೆ.

ಫ್ಯಾಸಿಜಂ ವಿರೋಧವಾಗಿ ಪ್ರಸಿದ್ಧ ರಾಷ್ಟ್ರೀಯ ಹೋರಾಟವನ್ನು ನಡೆಸಿದ ತನ್ನ ಜನತೆಯನ್ನು ಆತನೂ ಅನುಸರಿಸದಿರಲಿಲ್ಲ. ಯುದ್ಧ ಮುಗಿಯಿತು. ತನ್ನ ಮಾತೃಭೂಮಿಗೆ ಮರಳಲು ರೋರಿಚ್ ಸೋವಿಯತ್ ರಷ್ಯದ ಅನುಮತಿಯನ್ನು ಪಡೆದ. "ನನ್ನ ಮಾತೃಭೂಮಿಯ ವೈಭವಕ್ಕಾಗಿ ದುಡಿಯಬೇಕೆಂಬ ಹೆಬ್ಬಯಕೆ ನನಗಿದೆ. ಯು. ಎಸ್. ಎಸ್. ಆರ್. ಗೆ ಅನುಕೂಲವಾಗಿಯೇ ಭಾರತದಲ್ಲಿ ನಮ್ಮ ಕಾರ್ಯಕಲಾಪಗಳು ಸಾಗಿವೆ. ಭಾರತೀಯರು ರಷ್ಯಾದ ವಿಷಯದಲ್ಲಿ ಅಪಾರ ಮಮತೆಯನ್ನು ತೋರಿದರೆಂಬ ವಿಷಯವನ್ನು ತಿಳಿಸಲು ಹರ್ಷವಾಗುತ್ತದೆ."–ಎಂದು 1947 ರ ಅಕ್ಟೋಬರ್ 26ರಲ್ಲಿ ಅವನು ರಷ್ಯಕ್ಕೆ ಬರೆದನು. ಅದೇ ವರ್ಷ ಡಿಸೆಂಬರ್ 13ರಲ್ಲಿ ರೋರಿಚ್ ಇಹಲೋಕವನ್ನು ತೊರೆದನು. ಅವನ ಸಮಾಧಿಯ ಕಲ್ಲಿನ ಮೇಲೆ ಹಿಂದಿ ಭಾಷೆಯಲ್ಲಿ "ಇಲ್ಲಿ ಭಾರತದ ಮಹಾ ಮಿತ್ರನೊಬ್ಬನ ಅವಶೇಷವಿದೆ" ಎಂದು ಬರೆಯಲಾಗಿದೆ.

ಇಂಡಿಯಾದ ಪತ್ರಿಕಾ ಪ್ರಪಂಚ ರೋರಿಚ್ಚನ ಮರಣದ ಬಗ್ಗೆ ದೀರ್ಘವಾದ ಲೇಖನಗಳನ್ನು ಪ್ರಕಟಿಸಿವೆ. ಜವಹರಲಾಲ್ ನೆಹರೂರವರು ರೋರಿಚ್ಚನ ಕಲಾಕೃತಿಗಳ ಪ್ರದರ್ಶನವನ್ನು ಆರಂಭಿಸುತ್ತ "ನಿಕೋಲಾಸ್ ರೋರಿಚ್ಚರ ಬಗೆಗೆ ನಾನು ಯೋಚಿಸಿದಾಗಲೆಲ್ಲಾ ಅವರು ಹಿರಿಯ ವಿದ್ವಾಂಸರಾಗಿ, ಲೇಖಕರಾಗಿ, ಭೂಶೋಧಕರಾಗಿ, ಮಾನವನ ಅನೇಕ ಕಾರ್ಯರಂಗಗಳನ್ನು ಬೆಳಗಿ ತೋರಿದ್ದಾರೆ. ಅವರ ಕಲಾಕೃತಿಗಳ ಗುಣವೇ ವಿಶಿಷ್ಟವಾದುದು. ಸಾವಿರಾರು ಕಲಾಕೃತಿಗಳಲ್ಲಿ ಪ್ರತಿಯೊಂದೂ ಅಪೂರ್ವ

ವಾದವು. ಈ ಪಂಚಚಿತ್ರಗಳನ್ನು ನೋಡಿದಾಗಲೆಲ್ಲಾ ಅವುಗಳಲ್ಲಿ ವಿಶೇಷವಾಗಿ ಹಿಮಾಲಯದ ನಿಸರ್ಗ ಚಿತ್ರಗಳೇ ಹೆಚ್ಚಾಗಿ ಕಾಣಬರುತ್ತವೆ. ಭಾರತದ ಮೇಲೆ ಗೋಪುರಕಟ್ಟಿ ನಿಂತಿರುವ ಆ ಉನ್ನತ ಗಿರಿಗಳು ಪ್ರಾಚೀನ ಕಾಲದಿಂದಲೂ ಭಾರತೀಯರ ಭಾಗ್ಯದ ಗಿರಿಗಳಾಗಿವೆ. ಕಾವಲು ಗೋಪುರಗಳಂತಿವೆ. ನಮ್ಮ ಇತಿಹಾಸದ ಬಗೆಗೆ ನಮ್ಮ ಚಿಂತನೆಯ ಬಗೆಗೆ ನಮ್ಮ ಸಂಸ್ಕೃತಿ ಹಾಗೂ ಆಧ್ಯಾತ್ಮಿಕ ಪರಂಪರೆಯ ಬಗೆಗೆ ಭಾರತದ ಭೂತಕಾಲದ ಅದ್ಭುತ ವರ್ಣಚಿತ್ರಗಳಲ್ಲಿ ಅಪೂರ್ವ ವೈಭವವನ್ನು ಕಾಣುತ್ತಿರುವ ನಾವು ಹೆಮ್ಮೆ ಪಡಬಹುದಾಗಿದೆ. ಅವರಿಗೆ ಕೃತಜ್ಞರಾಗಿರಬೇಕಾಗಿದೆ" ಎಂದು ಹೇಳಿದ್ದು ಸಹಜವೇ ಇದೆ.

ಆ ವರ್ಣಶಿಲ್ಪಿ ಕಣ್ಮರೆಯಾಗಿ ಅನೇಕ ವರ್ಷಗಳು ಜಾರಿವೆ. ಆ ಕಲಾಕೋವಿದ ತನ್ನ ಸ್ವದೇಶಕ್ಕೆ ಮರಳಿದ ಬಗೆಯೇ ಬೇರೆ. ತಂದೆಯ ಪ್ರವಾಸ ಕಾರ್ಯಗಳಲ್ಲಿಯೂ ಭೂಶೋಧನೆಗಳಲ್ಲಿಯೂ, ಅತ್ಯಂತ ಆಪ್ತನಂತೆ ನೆರವಾದವನೂ, ಪೌರ್ವಾತ್ಯ ವಿದ್ವಾಂಸನೂ, ಭೂಗರ್ಭ ಶಾಸ್ತ್ರಜ್ಞನೂ ಆದ ರೋರಿಚ್ಚರ ಪುತ್ರ ಯೂರಿ ತನ್ನ ಜೊತೆಯಲ್ಲಿ ತಂದೆಯ ಅಪಾರ ಕಲಾಕೃತಿಗಳನ್ನು ತೆಗೆದುಕೊಂಡು ಹೋಗಿದ್ದು, ರೋರಿಚ್ಚರ ಕಲಾ ಪ್ರದರ್ಶನವೊಂದು ಮಾಸ್ಕೋವಿನಲ್ಲಿ ತೆರೆಯಲ್ಪಟ್ಟಿತು. ಅನಂತರ ಅದನ್ನು ಲೆನಿನ್ ಗ್ರಾಡ್‌ಗೆ ವರ್ಗಾಯಿಸಲ್ಪಟ್ಟಿತು. ನಿಕೋಲಾಸ್ ರೋರಿಚ್ಚರ ಕೃತಿಗಳನ್ನು ನೋಡಲು ನಿಂತ ಜನಪಂಕ್ತಿಯಷ್ಟು ಹಿರಿಯ ಜನಸಮೂಹವನ್ನು ಮಾಸ್ಕೊನಗರ ಎಂದೂ ಕಂಡಿರಲಿಲ್ಲ,

ಆಗ ಸೋವಿಯತ್ ಜನತೆ ಆ ಉದ್ದಾಮ ಕಲಾವಿದನಿಗೆ ಕೃತಜ್ಞತೆಗಳನ್ನು ಸಲ್ಲಿಸಿತು. ಪೂರ್ವದ ವೈಭವವನ್ನು; ಭಾರತದ ಭವ್ಯತೆಯನ್ನು ಕವಿಶಕ್ತಿಯಲ್ಲಿ ಕಲ್ಪಿಸಿ ಮೂಡಿಸಿರುವ, ವಿಶ್ವಾಸ ಮರದ ವಿರುದ್ಧವಾಗಿ ಕುಂಚದಿಂದಲೂ ಲೇಖನಿಯಿಂದಲೂ ಹೋರಾಡಿರುವ, ಪವಿತ್ರಧರ್ಮ, ಸಂತೋಷ ಸೌಂದರ್ಯಗಳು ಅಳಿಯದಂತೆ ಉಳಿಯಲು ಸತತ ಶ್ರಮಿಸಿದ ಆ ಕಲಾಯೋಗಿಗೆ ಗೌರವದಿಂದ ಮಣಿಯಿತು.

*["ಸೋವಿಯತ್ ಉಮನ್", "ಪೋರಂ" ಮತ್ತು 'ಯುನೈಟೆಡ್ ಏಷಿಯಾ' ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳನ್ನು ಆಧರಿಸಿ ಬರೆದ ಲೇಖನ ಇದು.]

# ಕಪ್ಪು ಕುದುರೆಯ ಹಾಡು

ಹೆಸರುವಾಸಿ ಗದ್ದಿಗೆ ಸ್ವಾಮೀಯ ಮುಂದೆ
ಕೈಜೋಡಿಸಿ ಬಾಗಿ
ತೂಗಿದ ಬಳ್ಳಿ. ಉದ್ದಂಡ ಕೆಡೆದು
ಎಡೆಯಾಗಿ ಬೆಡತೊಡಗಿದ್ದು –
ಕನ್ನೆಗಡಸಿನ ಹದಿಯೊಡಲಿಗೊಂದು
ರೂಪಾಯಿ ಬಣ್ಣದ ಹೋರಿ
ಮದರಂಗಿ ಬಾಳಗಿಡ ಹಿಡಿದ ರೋಗ
ಆದಷ್ಟು ಬೇಗ ನಿರ್ವಂಸವಾಗ
ಮಡಕೆಕುಡಿಕೆಗಳ ತುಂಬ
ಅನುಗಾಲ ಹಾಲುಮೊಸರಿನ ಯೋಗ....

ಗಂಟೆಯಿಂದ ಗುಂಡುಕಲ್ಲಾಗೇ ನಿಂತಿದ್ದ ಮುದ್ದ
ಗರ್ಭಗುಡಿ ಸೆಖೆ ತಡೆಯುಲಾರದೆ, ಉಸಿರು ಕಟ್ಟಲು
ಮೆತ್ತಗೆ ತಲ್ಲೀಗೆ ತಟ್ಟಿ
ಹೊರಗಟ್ಟಿಕೊಂಡು ಬಂದ ಉಪಾಯದಲ್ಲಿ.

* * *

ಮಾರ್ಗಮಧ್ಯೆ
ದಿಕ್ಕು ತಪ್ಪಿದ ಜೋಡಿ ಹೊಕ್ಕಪುರ–
ಕೋಲುಪದದಲ್ಲಿ ತನ್ನ ಚಂದಾ ನೋಡಲು
ಸಾಕ್ಷಾತ್ ಶಿವ-ಚಂದ್ರಾಮರೇ ಬಂದಂತ
ಲಿಂಬೆ ಕೆರೆ ಊರು !
ಥಟ್ಟನೆ ಚದುರೆ
–ಯಕ್ಷಿ ಪಟಲದ ಮೇಲೆ ತರಾವರಿ ಮೂಡಿ
ಕಾಡತೊಡಗಿತು–ನೆಚ್ಚಿನ ಗೆಣೆಕಾತಿ
ಎಂದೋ ಬಣ್ಣಿಸಿದ್ದ ಒಳ್ಳೊಳ್ಳೆ ಅರಬ್ಬೀ ರಾಕಣಗಳ
ತಕತ್ತೈ ಠೋಳಿ !
    ಜತೆಯ ಹೊಲ-ಮನೆ ಧ್ಯಾನಿ
    ಕೊಸರಾಡಿದರು ಬಿಡದೆ ಎಳೆದೊಯ್ದೀ
    ಒಯ್ದಳು ಸುವಿಶಾಲ ಬಯಲಿನ ಕಡೆಗೆ
ಹಯ ಸದನದ ಮಹಾದ್ವಾರ
ದಾಟಿದೇಟಿಗೆ ರಸದುಂಬಿ
ಯ ಮೈಯಲ್ಲ ಕಣ್ಣು ಕಿವಿ ಬಾಯಿ !

ಬಿ. ರಾಜಣ್ಣ. ಪ್ರೊಡಕ್ಷನ್ ಕಂಟ್ರೋಲ್ ಇಲಾಖೆ, VISL, ಭದ್ರಾವತಿ-577301

'ಯಪ್ಪ! ಯಾಪಾಟಿ! ಏನು ಕತೆ-ಅದೇನು ಹೊಳಪು!
ಅವೇಟು ಬಗೆ ಬಣ್ಣ! ಅದರ ಆ ನಡಗೆ! ಅದರ ಆ ಕೆನತ!
ಇದರ ಈ ಕುಣಿತ. ಥಕಥೈ ನೆಗೆತ! ಟಕ್ಕ ಟಕ್ಕ ಟಕ್ಕನಾ
ಓಟ!...ನಿವಾಳಿಸೆಸೆಯಬೇಕಿಲ್ಲಿ
...ಕಪ್ಪು ಕುದುರೆಯು ಹಾಡು
ತನ್ನೂರಿನ ಸುಣ್ಣದ ಸಣ್ಣೀರ-ಗೊಂಬೆಹೊಂಬರ
ಆ ಗೊಣ್ಣೆಸುರುಕ ಗೂಬೆಸೊಣ್ಣಗಳನ್ನೆಲ್ಲ ಅಂತ
ಜಲಝಲಿತಳು ಉಜ್ವಲೆ ನಖಶಿಖಾಂತ!
'ಒಂದು ಕಂತ್ರಿಗೂ ಎಷ್ಟೊಂದು ಬಿಚ್ಚ ಬೇಕು ಗೊತ್ತಾ'ಅಂತ
ಹುಬ್ಬು ಹಾರಿಸಿ ಕ್ಷಣ ಮಿಂಚಿದನು ಮಂಕ
ನೀರುಗಣ್ಣಿಯ ಭುಜ ತಿವಿದು!
ತನ್ನ ಕೋಳಿಪುಟ್ಟ ಕಟ್ಟಿದ ಬೆಲೆಯು
ತಳಬುಡ ಸಿಕ್ಕದ (ನಡು) ಬಡವಿಗೆ
ಮತ್ತಷ್ಟು ಬೆಕ್ಕಸ!
ಇದ್ದಕ್ಕಿದ್ದಂತೆ, ಲಂಗುಲಗಾಮಿಲ್ಲದ
ನೀಳ ಬಳ್ಳಿಯ ಕೊದಾರಿಯೊಂದು ಕೆನೆಯುತ್ತ
ಕೆರೆಯುತ್ತ ಸಮೀಪಿಸುತ್ತಿದ್ದದ್ದ ಕಂಡು
ಎದೆಯೊಡೆದ ಗಂಡು ಸಟ್ಟನೆ ಕಾಲಿಗೆ ಬುದ್ಧಿ ಹೇಳಿದ
ಮನೆ-ಮಠ ಮರೆತವಳ ದರದರ ಎಳೆದುಕೊಂಡು
...ಆ 'ನೀಲ'ನ ಮಾರುದ್ದದ ಚೌಲೀ ಬಾಲದ
ಜೇವೀ ಕಿತ್ತು, ತನ್ನ 'ಲಾಲಿಮಯ್ಯ'ನ ತೊಡೆಯು
ಹುಲ್ಲುರಿ ರಟ್ಟೆ ತಾಯಿತಕೆ ಕಟ್ಟಿ, ತಕ್ಕಮಟ್ಟಿಗೆ
(ಜೀವರಸ) ಗಟ್ಟಿಗೊಳಿಸುವಾಸೆಯಷ್ಟನ್ನೇ ಹೊತ್ತು ಹಿಂ
ಬಾಲಿಸಿದಳು ಬಾಲೆ ಸುಯ್ಯುತ್ತ!

* * *

ಊರು ಮುಟ್ಟಿದ ರಾತ್ರಿ
ಒಂದು ಹೊತ್ನಲ್ಲಿ 'ಕುದ್ರೇ ಕುದ್ರೆ, ಕರೀ ಕುದ್ರೇ...
ಹಾ! ಕಚ್ಚೇ ಬುಡ್ತು" ಅಂತ ಕಿರಿಚಿದ್ದು
ಒಂದೇ ಸಮ ಮುಲುಕ ತೊಡಗಿದಳು ಹುಡುಗಿ
ಹೊದ್ದ ಕಂಬಳಿ ಕೊಡಗಿ
ಗರ ಗಸ ಉಸುರಿನಪ್ಪಯ್ಯ
ಜಪ್ಪಯ್ಯ ಅನಲೇ ಇಲ್ಲ
ಮುಂಗೋಳಿ ಕೂತ
ಮೂಡು ಕೆಂಪೇರುವವರೆಗೆ!

—ಬಿ. ರಾಜಣ್ಣ

## 'ಅಂತರಾಷ್ಟ್ರೀಯ ಮಹಿಳಾದಿನ—ಒಂದು ಪುಟ್ಟ ವರದಿ'

ಪ್ರತಿ ವರ್ಷದಂತೆ ಈ ಸಾರಿಯೂ ಮಾರ್ಚಿ 8ನೆಯ ತಾರೀಖು ಮಹಿಳಾದಿನ ಬಂತು. ಬೆಂಗಳೂರಿನಲ್ಲಿ ನಾನು ಈ ಸಾರಿ ಕಂಡ ವಿಶೇಷವೆಂದರೆ ಯಾವುದೇ ಒಂದು ದಿನಕ್ಕೇ ಸೀಮಿತವಾದ ಘೋಷಣೆ ಅಥವಾ ಪ್ರದರ್ಶನ ಇರಲಿಲ್ಲ. ಬೆಂಗಳೂರಿನ ವಿವಿಧ ಮಹಿಳಾ ಸಂಘಟನೆಗಳೂ ಒಟ್ಟುಗೂಡಿ ಒಂದು ಕಾರ್ಯಕ್ರಮವನ್ನು ಹಾಕಿಕೊಂಡಿರಲಿಲ್ಲ.

ಹಾಗಿದ್ದೂ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಮತ್ತು ಜಾಗೃತ ಮಹಿಳಾ ಅಧ್ಯಯನ ಕೇಂದ್ರವು ಕೂಡಿಕೊಂಡು ಎರಡು ದಿನಗಳ ವಿಚಾರಗೋಷ್ಠಿಯನ್ನು ಏರ್ಪಡಿಸಿದ್ದರು. ಸೀಮಿತ ಸಂಖ್ಯೆಯಲ್ಲಿ ಇಲ್ಲಿ ವಿವಿಧ ಕೋಮು, ಸಂಗಟನೆಗಳ ಪುರುಷರು, ಮಹಿಳೆಯರು ಹಾಜರಿದ್ದು ಸಾಕಷ್ಟು ಅರ್ಥಪೂರ್ಣವಾದ ಚರ್ಚೆ ನಡೆದದ್ದು ಗಮನಾರ್ಹ. ಸಾಂಪ್ರದಾಯಿಕ ವಿಷಯಗಳಾದ 'ವರದಕ್ಷಿಣೆ' ಮತ್ತು 'ವಧೂ ದಹನ'ದ ತಿಕ್ಕಾಟ ಇಲ್ಲಿ ನಡೆಯಲಿಲ್ಲ. ಒಟ್ಟಿನಲ್ಲಿ ಎಲ್ಲ ಹಂತಗಳಲ್ಲಿ ಮಹಿಳೆಯ ಮಾನವಿಕ ಹಕ್ಕುಗಳ ಬಗೆಗೆ ವಿವಿಧ ದೃಷ್ಟಿಕೋಣಗಳಿಂದ ಇಲ್ಲಿ ಚರ್ಚೆ ನಡೆಯಿತು. ಹಾಗೂ, ಪುರುಷನನ್ನು ಪ್ರತಿದ್ವಂದ್ವಿಯಾಗಿ ಭಾವಿಸದೆ, ಆತನ ದೃಷ್ಟಿಕೋಣದಲ್ಲಿ ಬದಲಾವಣೆ ತರಬೇಕೆಂಬ ಕಡೆ ಒತ್ತು ಇದ್ದುದು ಇಲ್ಲಿ ನೆನಪಿನಲ್ಲಿಡಬೇಕಾದ ವಿಷಯ. ವೈಯಕ್ತಿಕ ಕಾನೂನಿನಲ್ಲಿ ಮಹಿಳೆಯ ಸ್ಥಾನವನ್ನು ಚರ್ಚಿಸುವಾಗ, ಮುಸ್ಲಿಂ ಮಹಿಳೆಗೆ ಸಂಬಂಧಪಟ್ಟಹಾಗೆ ಇಸ್ಲಾಮಿ ಕಾನೂನಿನಲ್ಲಿ ಅವಳಿಗೆ ತಲಾಕ್ ಆದಾಗ ಗಂಡನ ಎಲ್ಲ ಆಸ್ತಿಯಲ್ಲಿನ ಅರ್ಧ ಭಾಗ ಹಕ್ಕು; 'ಮಹತ್' ಅಥವಾ ವಧೂದಕ್ಷಿಣೆಯ ಸವಲತ್ತು ಮತ್ತು ಮದುವೆಯ ಜೊತೆಗೆ ಮಹಿಳೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳದಿರುವುದು ಮದುವೆಗೆ ಅವಳ ಸಹಿಯು ಅಗತ್ಯ. ಮದುವೆಯ ಕುರುಹಾಗಿ ಮಹಿಳೆ ಏನೂ ಕೊಡಬೇಕಾಗಿಲ್ಲ ಮತ್ತು ವಿಧವೆಯಾಗಿ ಅವಳು ಏನೂ ಕಳಚಬೇಕಾಗಿಲ್ಲ, ಹಾಗೂ ರಜಸ್ವಲೆಯಾದಾಗ ನಮಾಜ್‌ನಿಂದ ವಿನಾಯಿತಿ ಇಲ್ಲ ಎಂಬ ಮುಖ್ಯ ವಿಷಯಗಳನ್ನು ಪರಿಚಯ ಮಾಡಿಸಿ ಭಾರತದಲ್ಲಿ ಮುಸ್ಲಿಂ ಸಮುದಾಯವು

ಭಾ. ಯ. ಲಲಿತಾಂಬ, 811, 10ನೇ 'ಎ' ಮುಖ್ಯ ರಸ್ತೆ. ಮೊದಲಹಂತ, ಇಂದಿರಾನಗರ,
ಬೆಂಗಳೂರು-560038

ಈ ಹಕ್ಕನ್ನು ಹೇಗೆ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿದೆ, ಅದನ್ನು ವಿರೋಧಿಸಬೇಕು, ಎಂಬ ವಿಷಯವನ್ನು ಚರ್ಚಿಸಿದರು. ಹಾಗೆಯೇ, ಆಗಾಗ್ಗೆ 'ಹೋರಾಟ' 'ವರ್ಗ' 'ವಿಮೋಚನೆ' ಮುಂತಾದ ಕೆಲವು ರಾಜಕೀಯವಾದ ಶಬ್ದಗಳನ್ನು ಆಗಾಗ್ಗೆ ಉಚ್ಚರಿಸಿದರು. ಆದರೂ ಒಟ್ಟಾರೆ ದೃಷ್ಟಿಕೋಣವು 'ಸಮಾನತೆ'ಯನ್ನು ಗಳಿಸುವುದರ ಕಡೆಗಿತ್ತು ಎಂಬುದು ನಿಜ. ಶಿಕ್ಷಿತರಾಗಿ ಗೋಷ್ಠಿಯಲ್ಲಿ ಭಾಗವಹಿಸುವ ಮಹಿಳೆಯರೂ, ಮನೆಗಳಲ್ಲಿ ಅದರಲ್ಲೂ ಹಳ್ಳಿಗಾಡಿನಲ್ಲಿ ನೆಲಸಿರುವ ಗೃಹಸ್ಥ ಮಹಿಳೆಯರ ಸಮಸ್ಯೆಗಳೂ ಬೇರೆ–ಬೇರೆಯವೇ ; ಸಮಾಜದ ಚೌಕಟ್ಟಿನಲ್ಲಿ ಬಾಳುತ್ತಿರುವ ಅಶಿಕ್ಷಿತ ಮಹಿಳೆಯರನ್ನು ಬದಲಾಯಿಸುವಾಗ ಅಡ್ಡಿ ಬರುವ ಭಾರತೀಯ ಆಶಾಢಭೂತಿ ಮನಸ್ಸನ್ನು ಬದಲಾಯಿಸಬೇಕಾದುದು ಅಗತ್ಯ : ಮಹಿಳಾ ಆಂದೋಳನದ ಸಂದರ್ಭದಲ್ಲಿ, ಲೈಂಗಿಕ ಸ್ವಾತಂತ್ರ್ಯವನ್ನಷ್ಟೇ ಅನುಭವಿಸುತ್ತಿರುವ ವಿದೇಶೀ ಮಹಿಳೆಯರು ನಮ್ಮ ಆದರ್ಶವಾಗಬಾರದು, ಮತ್ತು ಪುರುಷನನ್ನು ಶತ್ರುವೆಂದು ಭಾವಿಸಿ, ಅವರಿಗೆ ವಿರುದ್ಧವಾಗಿಯೇ ಮಹಿಳೆಯರನ್ನು ಪ್ರಚೋದಿಸುವುದು, ಕುಟುಂಬ ವ್ಯವಸ್ಥೆಯೇ ಬೇಡ ಎನ್ನುವುದು ಅಪಾಯಕಾರಿ.

ಇಲ್ಲಿ ಮಹಿಳಾ ಪ್ರಗತಿ ಮತ್ತು ಆರ್ಥಿಕ ಯೋಜನೆಗಳು, ಮಹಿಳಾ ವಿದ್ಯಾಭ್ಯಾಸದ ಗೊತ್ತುಗುರಿಗಳು, ಸಮೂಹ ಮಾಧ್ಯಮದಲ್ಲಿ ಮಹಿಳೆ, ಉತ್ಪಾದನಾ ಕ್ಷೇತ್ರದಲಿ ಮಹಿಳೆ, ವಿವಿಧ ತಾತ್ವಿಕ ಚಿಂತನೆಗಳಲ್ಲಿ ಮಹಿಳೆ ಇವೇ ಮುಂತಾದ ವಿಷಯಗಳು ಇಲ್ಲಿ ಚರ್ಚಿತವಾದವು.

ಮಹಿಳೆಯರು ಆಂದೋಳನದಲ್ಲಿ ಮುಂದುವರಿಯುವಾಗ ಪ್ರಾದೇಶಿಕವಾದ ಉಡುಪಿನಲ್ಲಿ ಅವರು ಸಾಮಾನ್ಯ ಗೃಹಿಣಿಯರನ್ನು ಬರಸೆಳೆಯಲು ಸಾಧ್ಯ ಎಂಬುದನ್ನು ಇಲ್ಲಿ ಎಲ್ಲರೂ ಒಪ್ಪಿದರು.

ಒಬ್ಬಿಬ್ಬರು ಪುರುಷರು ಈ ಗೋಷ್ಠಿಯ ಉದ್ದೇಶವನ್ನು ಹಾಳು ಮಾಡುವಂತಹ ಮಾತುಗಳನ್ನು ಆಡಿದರಾದರೂ ವ್ಯವಸ್ಥಾಪಕರ ಒಟ್ಟು ಉದ್ದೇಶ ಪ್ರಭಾವಕಾರಿಯಾಗಿತ್ತು ಅನ್ನುವುದರಲ್ಲಿ ಸಂದೇಹವಿಲ್ಲ.

## 'ಹೆಣ್ಣು' ಒಂದು ಆಂತರಿಕ ಸಂಗತಿ

ನಮ್ಮ ಸಮಾಜದಲ್ಲಿ ಏನೂ ನಡೆಯದಿದ್ದರೂ ಅನ್ಯಾಯಗಳನ್ನು ನಿಲ್ಲಿಸುವ ನೆಪದಲ್ಲಿ ದಿನಾಚರಣೆಗಳನ್ನು ತಪ್ಪದೆ ನಡೆಸುತ್ತೇವೆ. ಇತ್ತೀಚಿನ ದಿನಗಳಲ್ಲಿಯಂತೂ

ದಿನಾಚರಣೆಗಳ ಗುಂಪಿಗೆ 'ಹೆಣ್ಣಿನ ದಿನಾಚರಣೆ' ಸೇರಿಕೊಂಡಿದೆ. ಹೆಣ್ಣಿನ ಬಗ್ಗೆ ಶೋಷಣೆ ಇಂದು ಮೊನ್ನೆಯದಲ್ಲ. ಹಾಗೆಯೇ ಕೇವಲ ನಮ್ಮ ಸಮಾಜಕ್ಕೆ ಸೀಮಿತವಾದುದಲ್ಲ. ಈ 'ಶೋಷಣೆ' ಇಡೀ ವಿಶ್ವದ ಉದ್ದಗಲಕ್ಕೂ ಹರಡಿಕೊಂಡಿದೆ. ಹಿಂದುಳಿದ ರಾಷ್ಟ್ರಗಳಲ್ಲಿ ಇದರ ಸ್ವರೂಪ ತೀವ್ರವಾಗಿ ಎದ್ದು ಕಾಣಬಹುದು. ಇದಕ್ಕೆ ಸಂಬಂಧಿಸಿದಂತೆ ನಾನಾ ಕಾರಣಗಳಿರಬಹುದು. ಒಟ್ಟು ಸಮಾಜದಲ್ಲಿ ಶೋಷಣೆಯ ಸ್ವರೂಪಗಳು ಎಷ್ಟಿವೆಯೋ ಅಷ್ಟೇ ಪ್ರಮಾಣದಲ್ಲಿ ಹೆಣ್ಣು ತುಳಿತಕ್ಕೆ ಒಳಗಾಗುತ್ತಿರುವುದನ್ನು ಕಾಣಬಹುದು. ಹೆಣ್ಣು ಜಾಗೃತಳಾಗಿದ್ದಾಳೆಂದು ಕೊಂಡರೂ 'ಹಿಂಸೆಯ' ಸ್ವರೂಪ ತೀವ್ರವಾಗಿಯೇ ಇದೆ.

ಶೋಷಣೆಯ ವಿರುದ್ಧದ ನಮ್ಮ ಪ್ರತಿಭಟನೆ–ಕೂಗು ಭಾವುಕತೆಯ ನೆಲೆಯನ್ನು ಮೀರಿ ನಿಂತಾಗ ಮಾತ್ರ ಅದಕ್ಕೆ ಅರ್ಥ ಬರಲು ಸಾಧ್ಯ. ಆದರೆ ಈ ತುಳಿತದ ವಲಯದಲ್ಲಿ ಕೊನೆಯ ಪಕ್ಷ ಕೆಲವು ಬಂಧನಗಳಿಂದಲಾದರೂ ಬಿಡುಗಡೆಯಾಗಲು ಬಯಸುವುದು ಸ್ವಾಭಾವಿಕ. ಹೆಣ್ಣನ್ನು ನಿರಂತರ ಭೋಗವಸ್ತುವಿನ ಚೌಕಟ್ಟಿನಲ್ಲಿಯೇ ನೋಡುವುದು ತಪ್ಪಬೇಕು. ಆಗ ಮಾತ್ರ ಅವಳ ಸುತ್ತ ರೂಪುಗೊಳ್ಳುವ ಸಂಶಯ ಮತ್ತು ಸಂದೇಹಗಳ ಜಾಲ ಸಡಿಲಗೊಂಡು ನೇರವಾಗಿ ಉಸಿರಾಡಲು ಅನುಕೂಲವಾಗುವುದು.

ಹೆಣ್ಣು ನೀಟಾಗಿ ಬಟ್ಟೆ ತೊಟ್ಟು ಹೊರಗೆ ಬಂದಾಕ್ಷಣ ಎಲ್ಲಾ ಕಟ್ಟುಪಾಡುಗಳನ್ನು ಬಿಟ್ಟವಳು ಎಂಬ ಗೊಣಗಾಟ ಈಗಲೂ ಬಹಳಷ್ಟು ಪುರುಷರಲ್ಲಿ ಭೂತಾಕಾರವಾಗಿದೆ. ಅದನ್ನು ತೊಲಗಿಸಬೇಕಾದರೆ ಹೆಣ್ಣು-ಗಂಡು ಪರಸ್ಪರ ಪರಿಸರವನ್ನು ಅರಿಯಲು ಪ್ರಯತ್ನಿಸಬೇಕಾಗುತ್ತದೆ. ನಮ್ಮ ಸಾಂಪ್ರದಾಯಕ ಚೌಕಟ್ಟುಗಳಿಗೆ ವಿಚಾರದ ಚಿಕಿತ್ಸೆ ನೀಡಬೇಕಾಗಿದೆ. ಆಗ ಮಾತ್ರ ಸ್ವಲ್ಪಮಟ್ಟಿನ ನೆಮ್ಮದಿಯನ್ನು ಹೆಣ್ಣು ಪಡೆಯಲು ಸಾಧ್ಯವಾಗಬಹುದು. 'ಮಹಿಳಾ ದಿನಾಚರಣೆ' ಸಾರ್ಥಕತೆಯನ್ನು ಪಡೆಯುವುದು ಈ ಹಂತದಲ್ಲಿಯೇ. ಹೆಣ್ಣನ್ನು 'ಬೆತ್ತಲೆ ಸೇವೆ' ಯಲ್ಲಿ ತೊಡಗಿಸುವ ಪುರುಷ ನಗರಗಳಲ್ಲಿ 'ಕ್ಯಾಬರೆ'ಗಳನ್ನು ಸೃಷ್ಟಿಸುತ್ತಾನೆ. ಈ ಅನಾಗರಿಕ ತೀಟೆಗಳನ್ನು ವಿವರಿಸಲು ಸಿದ್ಧಾಂತದ ಮಾತುಗಳು ಅರ್ಥಪೂರ್ಣ. ಮೊದಲು ಈ 'ಸೇವೆ'ಯ ರೂಪಗಳು ಯಾವುದೇ ಬಗೆಯದಾಗಿದ್ದರೂ ತೊಲಗಿಸಲು ಪ್ರಯತ್ನಿಸಬೇಕು. ಹಾಗೆಯೇ ಇಂದು ನಮ್ಮ 'ಜಾಹಿರಾತು ಸಂಸ್ಕೃತಿ' ಮತ್ತೊಂದು ರೀತಿಯ ಬೆತ್ತಲೆ ಸೇವೆಯೇ ಆಗಿದೆ. ಆದ್ದರಿಂದ ಇಂಥದನ್ನೆಲ್ಲ ಕಿತ್ತೆಸೆಯಲು 'ದಿನಾಚರಣೆ' ಒಂದು ಕಾರ್ಯಕ್ರಮವಾದರೆ ಚೆನ್ನಾಗಿರುತ್ತೆ.

— ನಿರ್ಮಲಾರೆಡ್ಡಿ

# 'ತುಘಲಕ್' ದಹಿನ್ನೆಲೆ: ಗಿರೀಶ್ ಕಾರ್ನಾಡ್ ವಿವರಿಸಿದಂತೆ

—ವಿಶಾಲಭಟ್

ಸ್ವಜನಶೀಲ ಲೇಖಕ ಕೃತಿಯೊಂದನ್ನು ರಚಿಸಿದ ಅನಂತರ ಆ ಕೃತಿ ಓದುಗರಿಗೆ ಸೇರಿದ್ದಾಗಿ ಬಿಡುತ್ತದೆ. ಕೃತಿಯೊಳಗಿನ ಸಾಕ್ಷಿಗಳಿಂದ ಓದುಗ ಕೃತಿಯನ್ನು ಅರ್ಥೈಸಿ ಕೊಳ್ಳುತ್ತಾನೆ. ಹಾಗಿದ್ದರೂ ಕೃತಿಯ ಮೂಲಉದ್ದೇಶ ಹಾಗೂ ನಿರ್ದಿಷ್ಟ ಹಿನ್ನೆಲೆ ಲೇಖಕನಿಂದಲೇ ಸಿಕ್ಕಾಗ ಕೃತಿಪ್ರವೇಶ ಹೆಚ್ಚು ಸುಲಭವಾಗುತ್ತದೆ. ಈ ದೃಷ್ಟಿಯಿಂದ, ಇತ್ತೀಚೆಗೆ ಗಿರೀಶ್ ಕಾರ್ನಾಡರೊಡನೆ ನಡೆದ ಪ್ರಶ್ನೋತ್ತರಗಳ ವಿವರಣೆ ಇಲ್ಲಿದೆ.

ಮುಂಬಯಿ ವಿಶ್ವವಿದ್ಯಾಲಯದ ಇಂಗ್ಲೀಷ್ ಎಂ. ಎ. ವಿದ್ಯಾರ್ಥಿಗಳಿಗೆ ಗಿರೀಶ್ ಕಾರ್ನಾಡರ ಇಂಗ್ಲೀಷ್ ಭಾಷಾಂತರ ನಾಟಕ 'ತುಘಲಕ' ಪಠ್ಯವಾಗಿದೆ. ಇದರ ಬಗ್ಗೆ ವಿಚಾರ ವಿನಿಮಯದ ಕಾರಣದಿಂದ ಮುಂಬಯಿಯ ಕನ್ನಡ ವಿಭಾಗವು ಅವರನ್ನು ಕರೆಯಿಸಿ ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಆಸಕ್ತಿಯಿರುವ ಎಲ್ಲರಿಗೂ ಆಹ್ವಾನವಿತ್ತು. ಕೇವಲ ಸಾಹಿತ್ಯದ ವಿದ್ಯಾರ್ಥಿಗಳಲ್ಲದೆ ಉಳಿದವರೂ ಇದ್ದುದರಿಂದ ಮಿಶ್ರಕೇಳುಗರ ಕಾರಣದಿಂದ ಕೇವಲ ತುಘಲಕದ ಬಗ್ಗೆಯೇ ಅಲ್ಲದೆ ಇನ್ನುಳಿದ ವಿಷಯ ಗಳೂ ಚರ್ಚೆಯಲ್ಲಿ ಕಾಣಿಸಿಕೊಂಡವು. ಚರ್ಚೆಯ ಪ್ರಾಸ್ತಾವಿಕ ಭಾಗ ಗಿರೀಶ್ ಕಾರ್ನಾಡರ ಮಾತುಗಳಲ್ಲೇ ಇದೆ.

ಯಾವನೇ ಕಲಾಕಾರ ತನ್ನ ಕೃತಿಗಳ ಬಗ್ಗೆ ಮಾತಾಡುವುದು ತುಂಬ ಕಷ್ಟದ ಕೆಲಸ. ಕಲಾಕೃತಿಗಳ ಸೃಷ್ಟಿಕ್ರಿಯೆ ಎನ್ನುವುದೇ ಬಹಳ ನೋವಿನ ಅನುಭವ, ಪ್ರಸವದ ಹಾಗೆ. ಈಗ ಮತ್ತೆ ಪುನಃ ಅದರ ಬಗ್ಗೆ ಮಾತಾಡುವುದು ಕಡಿಮೆ ನೋವಿನ ಕೆಲಸವೇನಲ್ಲ.

ಮೊದಲಿಗೆ ತುಘಲಕದ ಸೃಷ್ಟಿಯ ಐತಿಹಾಸಿಕ ಸಂದರ್ಭವನ್ನು ಸ್ವಲ್ಪದರಲ್ಲಿ ಹೇಳುತ್ತೇನೆ. ನಾನು ತುಘಲಕವನ್ನು ಬರೆಯುವ ಕಾಲಕ್ಕಾಗಲೇ ನಮ್ಮಲ್ಲಿ ಹೊಸ ಅಲೆಯೊಂದು ಹುಟ್ಟಿಕೊಂಡಿತು. ಮೋಹನ್ ರಾಕೇಶ್, ವಿಜಯ ತೆಂಡೂಲ್ಕರ್, ಬಾದಲ್ ಸರ್ಕಾರ್ ಇವರೆಲ್ಲರೂ ಈ ಪ್ರಭಾವಕ್ಕೆ ಒಳಗಾದವರೇ.

ನಮ್ಮ ಭಾರತೀಯ ನಾಟಕ ಪರಂಪರೆಯನ್ನು ಈ ಸಂದರ್ಭದಲ್ಲಿ ನಾವು ಉಲ್ಲೇಖಿಸಬೇಕಾಗುತ್ತದೆ. ಬಹಳ ಹಿಂದೆ ನಮಗೆ ಸಂಸ್ಕೃತ ನಾಟಕಗಳ ಬಲವಾದ

---

ವಿಶಾಲ ಭಟ್ C/o ಡಾ॥ ಎಸ್. ಕೆ. ಹಾವನೂರು, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾನಿಲಯ, ವಿದ್ಯಾನಗರಿ, ಮುಂಬಯಿ–400098

ಪರಂಪರೆಯಿತ್ತು. ಕ್ರಿ. ಶ. ಸುಮಾರು 3ನೆಯ ಶತಮಾನದ ಭಾಸ ನಾಟಕಗಳ ದೊಡ್ಡ ಇತಿಹಾಸವನ್ನೇ ಸೃಷ್ಟಿಸಿದ್ದ. ಸುಮಾರು 9ನೆಯ ಶತಮಾನದ 'ಮುದ್ರಾರಾಕ್ಷಸ'ದ ವರೆಗೆ ಮುಂದುವರೆದ ನಾಟಕ ಪರಂಪರೆ ಆಮೇಲೆ ಒಮ್ಮೆಗೆ ಸ್ತಬ್ಧವಾಯಿತು. ಸಂಸ್ಕೃತ ಅದುವರೆಗೆ ಚಲಾವಣೆಯ ಭಾಷೆಯಾಗಿದ್ದು ಸತ್ತು ಹೋಯಿತು. ಇದರಿಂದಾಗಿ ಸಂಸ್ಕೃತ ನಾಟಕಗಳ ಪರಂಪರೆಗೆ ಒಂದು ಕೊನೆ ಕಾಣಿಸಿಕೊಂಡಿತು. ಆಮೇಲಿನ ಸುಮಾರು 1,000 ವರ್ಷಗಳ ದೀರ್ಘಕಾಲವನ್ನು ಕತ್ತಲೆಯ ಕಾಲ ಎನ್ನಬಹುದು.

ಹೀಗೆಂದಾಗ ರಂಗಭೂಮಿ ಇರಲೇ ಇಲ್ಲ ಎಂದು ತಿಳಿಯಬಾರದು. ನಾಟಕ ಮತ್ತು ರಂಗಭೂಮಿ ಇವುಗಳೊಳಗೆ ಗಮನಾರ್ಹ ಅಂತರ ಇದೆ. ಆಗ ಯಾರಿಗೂ ನಾಟಕ ರಚನೆ (Playwriting) ಬೇಕಾಗಿರಲಿಲ್ಲ. ಆದರೆ ಕಥೆಕ್ಕಳಿ-ಯಕ್ಷಗಾನ ಇತ್ಯಾದಿಗಳ ಮೂಲಕ ರಂಗಭೂಮಿ ಚಟುವಟಿಕೆಗಳು ನಡೆದೇ ಇದ್ದವು. (Improvisation ರೂಪದಲ್ಲಿ)

ಆ ಮೇಲೆ 19ನೆಯ ಶತಮಾನದಲ್ಲಿ ಬ್ರಿಟೀಷರ ರಂಗಭೂಮಿ ಮತ್ತು ನಾಟಕಗಳ ಪ್ರಭಾವ ನಿಧಾನವಾಗಿ ಮುಂಬಯಿ, ಕಲ್ಕತ್ತ, ದೆಹಲಿಗಳಂತಹ ನಗರಗಳಲ್ಲಿ ಕಾಣಿಸಿಕೊಂಡಿತು. ರಂಗಭೂಮಿಯ ಹೊಸ ಆಕಾರಗಳನ್ನು (forms) ಬ್ರಿಟಿಷರು ತೋರಿಸಿಕೊಟ್ಟರು. ಈ ಹೊಸ ಥಿಯೇಟರ್‌ನ ಪರಿಕಲ್ಪನೆಗಳು ಮುಖ್ಯವಾಗಿ ಎರಡು.

ಒಂದು—ಪ್ರೊಸೀನಿಯಮ್ ಥಿಯೇಟರ್ : ಬ್ರಿಟಿಷ್ ಪರಿಕಲ್ಪನೆ. ಭಾರತೀಯ ರಂಗಭೂಮಿಯ ಸ್ವರೂಪ ಪ್ರೊಸೀನಿಯಮ್‌ಗಿಂತ ಭಿನ್ನವಾದದ್ದು. ಪ್ರೊಸೀನಿಯಮ್ ರಚನೆಯಲ್ಲಿ ನೋಡುಗರೆಲ್ಲ ಒಂದು ಗುಂಪಿನಲ್ಲಿ ಕೇಂದ್ರೀಕೃತವಾಗಿದ್ದು ಕಿಟಕಿಯ ಮೂಲಕ ಕಾಣುವಂತಹ ಒಂದೇ ಕಡೆಯ ನೋಟವನ್ನು ಕಾಣುತ್ತಾರೆ. ಭಾರತೀಯ ರಂಗಭೂಮಿಯಲ್ಲಿ ನೋಡುಗರೆಲ್ಲ ವಿಶಾಲ ಪ್ರದೇಶದಲ್ಲಿ ಚದುರಿಹೋಗಿರುತ್ತಾರೆ.

ಎರಡು—ನಾಟಕಗಳು ಗಳಿಕೆಯ ವಸ್ತುಗಳಾಗಿ (commodity) ಕಾಣಿಸಿಕೊಂಡದ್ದು. ಇದು ನಮ್ಮ ಜಾನಪದ ರಂಗಭೂಮಿಯ ಪರಿಕಲ್ಪನೆಗೆ ತೀರಾ ವಿರುದ್ಧವಾದದ್ದು. ಈ ಎರಡು ಪ್ರಭಾವಗಳಿಂದಾಗಿ ಭಾರತದ ರಂಗಭೂಮಿಯ ಸ್ವರೂಪವೇ ಬದಲಾಯಿತು.

19ನೆಯ ಶತಮಾನದಲ್ಲಿ ಪಾರ್ಸಿ ನಾಟಕ ಕಂಪನಿಗಳು ಹುಟ್ಟಿಕೊಂಡಿದ್ದವು. ಈ ಕಂಪನಿಗಳು ಮೂಲತಃ ವ್ಯಾಪಾರ ಮತ್ತು ಗಳಿಕೆಯನ್ನೆ ಮುಖ್ಯ ಗುರಿಯನ್ನಾಗಿ

ಇರಿಸಿಕೊಂಡವುಗಳು. ಆಗ ಎಲ್ಲ ನಾಟಕಗಳಲ್ಲೂ ಒಂದು ಅಡಗೂಲಜ್ಜಿಯ ಕಥೆ (Story, tale) ಇರಲೇಬೇಕಿತ್ತು. ವಿಚಾರಗಳಿಗೆ ಅಂತಹ ಮಹತ್ವ ಇದ್ದಿರಲಿಲ್ಲ. ಆದ್ದರಿಂದ ಮೊದಲ ದರ್ಜೆಯ ಯಾವ ನಾಟಕಗಳೂ ಇರಲಿಲ್ಲ. ನನ್ನ ಸಮಯಕ್ಕೆ ಹೊಸ ಥಿಯೇಟರ್‌ನ ಪ್ರವೇಶವಾಗಿತ್ತು, ಮತ್ತು ಎರಡು ಪರಂಪರೆಗಳ ನಡುವಿನ ಸಂಘರ್ಷವಿತ್ತು. ಒಂದು – ಕಂಪನಿ ನಾಟಕಗಳ ಪರಂಪರೆ, ಇನ್ನೊಂದು – ಹೊಸ ರಂಗಭೂಮಿ.

ಪಾರ್ಸಿ ಶೈಲಿಯಲ್ಲಿ ಮುಖ್ಯವಾಗಿ ಎರಡು ವಿಧದ ದೃಶ್ಯಗಳನ್ನು ಅಳವಡಿಸಿಕೊಳ್ಳುತ್ತಿದ್ದರು. ಹೊರಾಂಗಣದ ತೆಳುವಾದ ದೃಶ್ಯಗಳು (Shallow Scenes) ಮತ್ತು ದರ್ಬಾರು, ಅರಮನೆಯಂತಹ ಆಳವಾದ ದೃಶ್ಯಗಳು (Deep Scenes). ಕೀರ್ತಿನಾಥ ಕುರ್ತಕೋಟಿ ಕನ್ನಡದ ಒಬ್ಬ ಪ್ರಸಿದ್ಧ ವಿಮರ್ಶಕ. ಅವರ ಅಭಿಪ್ರಾಯದಲ್ಲಿ ಎಲ್ಲ ಐತಿಹಾಸಿಕ ನಾಟಕಗಳು ಕೇವಲ ಉಡುಪು ತೊಡುಪುಗಳ ಅಬ್ಬರದಲ್ಲಿ ಮುಗಿದು ಹೋಗುವಂಥದ್ದಿತ್ತು. ಈ ಸಂದರ್ಭದಲ್ಲಿ ಪಾರ್ಸಿ ಶೈಲಿಯಲ್ಲೇ ಹೊಸ ಪ್ರಯೋಗವನ್ನು ಮಾಡಬೇಕು ಎನ್ನುವುದನ್ನು ಸವಾಲಾಗಿ ಸ್ವೀಕರಿಸಿ ತುಘಲಕ್ ಬರೆಯಲು ಹೊರಟೆ. ಅದಕ್ಕಾಗಿ ಮೊದಲು ಶಾಲಾ ಹುಡುಗನ ಹಾಗೆ ಇತಿಹಾಸದ ಎಲ್ಲ ಪುಸ್ತಕಗಳನ್ನು ಹುಡುಕಿದೆ. ತುಘಲಕನ ಪಾತ್ರ ಕುತೂಹಲವನ್ನು ಕೆರಳಿಸಿತು. ಅವನಿಗೆ ಸಂಬಂಧಿಸಿದ ಹಲವು ಪುಸ್ತಕಗಳನ್ನು ಅಧ್ಯಯನ ಮಾಡಿದೆ. ಬರೆಯಲು ಮೊದಲು ಮಾಡಿದೆ.

ಉದ್ದೇಶ ಪೂರ್ವಕವಾಗಿಯೇ ಬರವಣಿಗೆಯ ಸಮಯದ ನನ್ನ ಕಾಲದ ರಾಜಕೀಯವನ್ನು ನಾನು ನಾಟಕದಲ್ಲಿ ಬಳಸಿಕೊಳ್ಳಲಿಲ್ಲ. ಯಾಕೆಂದರೆ ಹಾಗೆ ಬಳಸಿದಾಗ ಜನ ಆ ಕಾಲದ ರಾಜಕೀಯದ, ಇತಿಹಾಸದ ಸತ್ಯಾಸತ್ಯತೆಯ ಬಗ್ಗೆ ತಲೆಕೆಡಿಸಿಕೊಳ್ಳುತ್ತಾರೆಯೇ ವಿನಃ ನಾಟಕದ ತಿರುಳಿನ ಬಗೆಗಲ್ಲ.

ಆ ಕಾಲದಲ್ಲಿ ನಾನು ಕಮೂ, ಸಾರ್ತ್ರರಿಂದ ಪ್ರಭಾವಿತನಾಗಿದ್ದೆ. ನನ್ನನ್ನು ಒಬ್ಬ ನಾಸ್ತಿಕ ಅಂತ ತಿಳಕೊಂಡಿದ್ದೆ. ಆದ್ದರಿಂದ ನನ್ನ ನಾಟಕದ ತುಘಲಕನನ್ನು ಒಬ್ಬ ನಾಸ್ತಿಕನನ್ನಾಗಿ ಮಾಡಬೇಕು ಎಂದು ಯೋಚಿಸಿದೆ. ಆದರೆ ಮತ್ತೆ ಕ್ರಮೇಣ ನನ್ನ ಯಾವುದೇ ವಿಚಾರಗಳನ್ನು ತುಘಲಕನಲ್ಲಿ ತುರುಕಬಾರದು ಎಂದು ನಿಶ್ಚಯಿಸಿದೆ.

## ಪ್ರಶ್ನೋತ್ತರಗಳು

ಪ್ರಶ್ನೆ : ಇತಿಹಾಸವನ್ನು ಎಷ್ಟರಮಟ್ಟಿಗೆ ಆಕರವಾಗಿ ಬಳಸಿಕೊಂಡಿದ್ದೀರಿ ? ಮತ್ತು ಹಾಗೆ ಬಳಸಿಕೊಳ್ಳುವಾಗ ಇತಿಹಾಸಕ್ಕೆ ಹೇಗೆ ನ್ಯಾಯ ಸಲ್ಲಿಸುತ್ತೀರಿ ?

ಉತ್ತರ; ನಾನು ಮುಖ್ಯ ಆಕರವಾಗಿ ಈಶ್ವರಿ ಪ್ರಸಾದರ History of Qaraunah ಎಂಬ ಪುಸ್ತಕವನ್ನು ಹೆಚ್ಚಾಗಿ ಬಳಸಿದ್ದೆ. ಇತಿಹಾಸದ ಸತ್ಯಾಸತ್ಯತೆ ಕಲಾಕಾರನಿಗೆ ಸಂಬಂಧಪಟ್ಟದ್ದಲ್ಲ. ಕಲಾಕಾರ ತನ್ನ ವಸ್ತು-ವಿಚಾರಗಳಿಗೆ ಹೊಂದುವಷ್ಟನ್ನೇ ಇತಿಹಾಸದಿಂದ ಆರಿಸಿಕೊಳ್ಳುತ್ತಾನೆ. ಉದಾಹರಣೆಗೆ ತುಘಲಕ ತನ್ನ ರಾಜ್ಯದಲ್ಲಿ ಪ್ರಾರ್ಥನೆಗಳನ್ನು ನಿಷೇಧಿಸಿದ್ದ ಎನ್ನುವ ಒಂದು ಅಡಿ ಟಿಪ್ಪಣಿ ರೂಪದ ವಿವರ ನನ್ನ ಕುತೂಹಲವನ್ನು ಕೆರಳಿಸಿತು. ನಾನದನ್ನು ಬಳಸಿಕೊಂಡೆ. ಇದರಿಂದಾಗಿ ನನ್ನ ನಾಟಕದ ವಿಚಿತ್ರ ಸ್ವಭಾವದ ತುಘಲಕ ಪಾತ್ರಕ್ಕೆ ಸಹಜತೆ ತಾನಾಗಿಯೇ ಬಂತು. ಇತಿಹಾಸವನ್ನು ಎಷ್ಟು ಬಳಸಬೇಕು ಎನ್ನುವುದು ಮುಖ್ಯ ಅಲ್ಲ, ಅದರಿಂದ ಏನು ಸೃಷ್ಟಿಸುತ್ತೀರಿ ಎನ್ನುವುದು ಮುಖ್ಯ. ಇತಿಹಾಸವನ್ನು ನೇರವಾಗಿ ಸತ್ಯಾಸತ್ಯತೆಯ ನೆಲೆಯಲ್ಲೇ ತೆಗೆದುಕೊಳ್ಳುವುದಾದರೆ ಇತಿಹಾಸದ ಪುಸ್ತಕಗಳನ್ನೇ ಓದಬಹುದಲ್ಲ.

ಪ್ರಶ್ನೆ : ನೀವು ನಾಟಕಗಳನ್ನು ಕೇವಲ ಬರಹವಾಗಿಯೇ ಬರೆದಿರೋ ಅಲ್ಲ ಸ್ಟೇಜ್ ಮಾಡುವುದಕ್ಕಾಗಿಯೋ ?

ಉತ್ತರ : ಒಬ್ಬ ನಾಟಕಕಾರ ಇವೆರಡನ್ನು ಬೇರೆ ಬೇರೆಯಾಗಿಡಲು ಬರುವುದಿಲ್ಲ. ಅವನೊಬ್ಬ ನಿಜವಾದ ನಾಟಕ ರಚನಕಾರನಾದರೆ ಬರೆಯುವ ಹೊತ್ತಿಗೆ ರಂಗಭೂಮಿ ಅವನ ಕಣ್ಣಮುಂದೆ ಬಂದೇ ಬರುತ್ತದೆ. ಹಾಗೆಂದು ರಂಗಭೂಮಿಯ ಎಲ್ಲ ಕ್ರಿಯಾ ಸಾಧ್ಯತೆಗಳನ್ನು ಪರಿಶೀಲಿಸಲಾಗುವುದಿಲ್ಲ, ಅದು ಸಾಧ್ಯವೂ ಇಲ್ಲ.

ಪ್ರಶ್ನೆ : ನಾಟಕದಲ್ಲಿ pessimistic attitude ಇದೆಯೇ ?

ಉತ್ತರ : ಕೊನೆ ದುಃಖಾಂತವಾದ ಮಾತ್ರಕ್ಕೆ ನಾಟಕದ ಇಡಿಯ ದೃಷ್ಟಿಕೋನ ನಿರಾಶೆಯದ್ದು ಆಗಬೇಕಾಗಿಲ್ಲ.

ಪ್ರಶ್ನೆ : ನಿಮ್ಮ ನಾಟಕದಲ್ಲಿ ಬರುವ ಅಝೀಝು ಮತ್ತು ಬರನಿಯವರ ಪಾತ್ರದಲ್ಲಿ ತುಘಲಕನ ಪ್ರತಿಬಿಂಬ ಇದೆಯೇ ?

ಉತ್ತರ : ಅದಿರಬೇಕು ಎನ್ನುವುದು ನನ್ನ ಉದ್ದೇಶ ಇರಲಿಲ್ಲ. ಎಷ್ಟೋ ಸಲ ಈ ಪ್ರತಿಬಿಂಬ ಮತ್ತು ಸಾಮ್ಯವನ್ನು ರಂಗಭೂಮಿಯ ನಟನೆಯಿಂದಾಗಿ ಜನರು ಕಂಡುಕೊಳ್ಳುತ್ತಾರೆ. ನಾಟಕದಲ್ಲಿ ನನ್ನ ಈ ಎರಡು ಪಾತ್ರಗಳೂ ಭಿನ್ನವಾಗಿಯೇ ಇವೆ.

ಪ್ರಶ್ನೆ : ನಿಮ್ಮ ನಾಟಕದಲ್ಲಿ ಬಂದಿರುವ ಸಂಕೇತಗಳಾವುವು ?

ಉತ್ತರ : ಚದುರಂಗದಾಟವನ್ನು ನಾನು ಒಂದು ಸಂಕೇತವಾಗಿ ಬಳಸಿದ್ದೇನೆ. ನಾಟಕ ರಚನೆಯ ಮೊದಲಿಗೆ ಅದು ನನಗೆ ತನ್ನ ತಾನೇ ಹೊಳೆದದ್ದು. ಆದರೆ ನಾಟಕದ ಅನಂತರದ ಬೆಳವಣಿಗೆಯಲ್ಲಿ ನಾನದನ್ನು ಉದ್ದೇಶಪೂರ್ವಕ ಎಚ್ಚರದಿಂದ ಬೆಳೆಸಿದ್ದೇನೆ. ಕೆಲವರು ಹೇಳುವ ಹಾಗೆ ಯಾವುದೇ ಸೃಷ್ಟಿಕ್ರಿಯೆ ಕೇವಲ ಸ್ಫೂರ್ತಿಜನ್ಯ, Spontanious ಮಾತ್ರ ಅಲ್ಲ. ಅದೊಂದು ಎಚ್ಚರದ ಕುಸುರಿ ಕೆಲಸ.

ಪ್ರಶ್ನೆ : ತುಘಲಕನಲ್ಲಿ 'ಕಮೂ'ನ ಪ್ರಭಾವ ಇದೆ ಅಲ್ಲವೇ ?

ಉತ್ತರ : ಹೌದು. ಆದರೆ ನೇರ ಪ್ರಭಾವ ಅಲ್ಲ. ನನ್ನ ಸಮಕಾಲೀನ ಜನಾಂಗವೆಲ್ಲ ಆ ಪ್ರಭಾವಲಯದಲ್ಲೇ ಇತ್ತು.

ಪ್ರಶ್ನೆ : ನಿಮ್ಮ ಬರವಣಿಗೆಯ ಕ್ರಮ ಏನು ?

ಉತ್ತರ : ನಾನು ಒಂದೇ ಏಟಿಗೆ(at a Stretch)ಬರೆಯಲಾಗುವುದಿಲ್ಲ. ಶ್ರೀರಂಗ ತೆಂಡೂಲ್ಕರ್ ಇವರೆಲ್ಲ ಹೆಚ್ಚಿನ ತಿದ್ದುಪಡಿಗಳಿಲ್ಲದೆ ಒಮ್ಮೆಗೇ ಬರೆದು ಮುಗಿಸುತ್ತಿದ್ದರಂತೆ. ನನಗೆ ಹಾಗೆ ಆಗುವುದಿಲ್ಲ, It is a concious craftmanship.

ಪ್ರಶ್ನೆ : ತುಘಲಕದ ಇಂಗ್ಲಿಷ್ ಅನುವಾದದ ಬಗ್ಗೆ ನಿಮ್ಮ ಅಭಿಪ್ರಾಯ ಏನು ?

ಉತ್ತರ : ನಾನು ಯಾವುದಾದರೂ ಒಂದು ಭಾಷೆಯಲ್ಲಿ ಮಾತ್ರ ನನ್ನನ್ನು ಪೂರ್ಣವಾಗಿ ತೊಡಗಿಸಿಕೊಳ್ಳಬಲ್ಲೆ, ಅಭಿವ್ಯಕ್ತಿಸಬಲ್ಲೆ. ನನ್ನ ಮಾಧ್ಯಮ ಕನ್ನಡ. ಇಂಗ್ಲಿಷ್ ಭಾಷಾಂತರ ಸ್ವಲ್ಪ ದುರ್ಬಲವಾಗಿದೆಯೆಂದೇ ಅನಿಸುತ್ತದೆ.

ಕನ್ನಡದಲ್ಲಿ ನಾನು ತುಘಲಕವನ್ನು ಬರೆಯುವಾಗಲೂ ನನಗೆ ಭಾಷೆಯ ಸಮಸ್ಯೆ ಇತ್ತು. ಹಿಂದೂಗಳ 'ಧರ್ಮ'ದ ಕಲ್ಪನೆ 'ಇಸ್ಲಾಂ'ಗಿಂತ ಭಿನ್ನವಾದದ್ದು ಆದ್ದರಿಂದ ಅಲ್ಲಿನ ಧರ್ಮ, ಪ್ರಾರ್ಥನೆ ಇತ್ಯಾದಿ ಪರಿಕಲ್ಪನೆಗಳನ್ನು ಕನ್ನಡಕ್ಕೆ ತರುವಾಗ ನಾನು ಅವುಗಳ ಅರ್ಥ ಬದಲಾಗದ ಹಾಗೆ ಪದಗಳನ್ನು ಎಚ್ಚರದಿಂದ ಹುಡುಕಬೇಕಿತ್ತು. ಆ ನಿಮಿತ್ತದಿಂದ ನನ್ನ ಕನ್ನಡವೂ ಕೆಟ್ಟದ್ದಿದೆ ಅಂತ ನನಗೆ ಅನಿಸುತ್ತಿತ್ತು. ಆದರೆ ಅದು ನನ್ನದೇ ಒಂದು ದಾರಿಯಾಗಿ ಕನ್ನಡಕ್ಕೆ ಹೊಸ ಒಂದು ಸಣ್ಣ ಸಾಧ್ಯತೆಯನ್ನು ಕೊಟ್ಟಿದೆ ಎಂದು ಭಾವಿಸಿದ್ದೇನೆ.

ಪ್ರಶ್ನೆ : ಯಾಕೆ ತುಘಲಕ ತನ್ನ ಮಲತಾಯಿಗೆ ಅಷ್ಟು ಕಠಿಣನಾಗಿದ್ದಾನೆ ? ತುಘ

ಲಕದ ಸ್ತ್ರೀ ಪಾತ್ರಗಳ ವಿಚಾರದಲ್ಲಿ ನೀವು ಸಾಕಷ್ಟು ಅವಜ್ಞೆಯನ್ನು ತೋರಿದ್ದೀರಿ.

ಉತ್ತರ : ತುಘಲಕನ ಕಠಿಣತೆಗೆ ನೀವು ನಾಟಕದಲ್ಲೇ ಉತ್ತರ ಹುಡುಕಬೇಕು. ಸ್ತ್ರೀ ಪಾತ್ರಗಳ ಬಗ್ಗೆ ನಾನು ಅವಜ್ಞೆ ತೋರಿಸಲಿಲ್ಲ. ಆಗಿನ ಹೆಂಗಸರು ಸಾರ್ವಜನಿಕ ಜೀವನದಲ್ಲಿ ಕಾಣಿಸಿಕೊಳ್ಳುತ್ತಲೇ ಇರಲಿಲ್ಲ. ನನಗೆ ತುಘಲಕನ ಸಾರ್ವಜನಿಕ ಸಂಬಂಧಗಳನ್ನು ಅವನ ಆಂತರ್ಯದ ಸಂಘರ್ಷಗಳ ಜೊತೆಗೆ ತರುವುದು ಬೇಕಿತ್ತು. ಸ್ತ್ರೀ ಪಾತ್ರಗಳನ್ನು ಹೆಚ್ಚು ಬೆಳೆಸಿದರೆ ನಾಟಕ ಹೆಚ್ಚು ವೈಯಕ್ತಿಕವಾಗಿ ನಾಟಕದ ದಾರಿ ಬೇರೆಯೇ ಆಗುತ್ತಿತ್ತು.

ಪ್ರಶ್ನೆ : ಯಯಾತಿಯ ಬಗ್ಗೆ ಕೆಲವು ಮಾತು ಹೇಳಬಹುದೇ ?

ಉತ್ತರ ; ಯಯಾತಿಯನ್ನು ಬರೆದಾಗ ನಾನು ವಿದೇಶ ವಾಸ್ತವ್ಯದ ಕಾರಣದಿಂದ ವಿಶೇಷ ಆತಂಕವನ್ನು ಎದುರಿಸುತ್ತಿದ್ದೆ. ಯಯಾತಿಯಲ್ಲಿ ಎರಡು ತಲೆಮಾರುಗಳ ನಡುವಿನ 'ದೂರ'ದಿಂದ ಹುಟ್ಟುವ ಸಂಘರ್ಷ ಇದೆ. ಪುರು ತನ್ನ ಮೇಲೆ ಹಿರಿಯರ ಆಕ್ರಮಣ ನಡೆದಿದೆ ಎಂದು ಭಾವಿಸುತ್ತಾನೆ. ನಾನೂ ನನ್ನನ್ನು ಅದೇ ಸ್ಥಾನದಲ್ಲಿ ಕಲ್ಪಿಸಿಕೊಂಡಿದ್ದೆ. ಆಗಿನ ಕಾಲದಲ್ಲಿ ವಿದೇಶ ಪ್ರವಾಸ ಸುಲಭವಾಗಿರಲಿಲ್ಲ. ನನ್ನ ಕುಟುಂಬದಿಂದ ವಿದೇಶಕ್ಕೆ ಹೋದವರಲ್ಲಿ ನಾನೇ ಮೊದಲಿನವ. ಸಹಜವಾಗಿಯೇ ಸಾಕಷ್ಟು ಗುಲ್ಲಾಗಿತ್ತು. ಆ ಒತ್ತಡದಿಂದ ಹೊರಬರುವ ಒಂದು ದಾರಿಯಾಗಿ 'ಯಯಾತಿ' ಹುಟ್ಟಿತು. ಅದನ್ನು ನಾನು ಒಂದು ಪರಿಹಾರ ಪಡೆಯುವ ಸಮಾಧಾನಕ್ಕಾಗಿ ಬರೆದೆ ಮತ್ತು ಪರಿಹಾರವನ್ನು ಒಂದು ಸ್ತರದಲ್ಲಿ ಪಡೆದೆ. ಆದರೆ ಅನಂತರದ ಯಾವ ನಾಟಕಗಳನ್ನು ಈ ಯಾವುದೇ ದೃಷ್ಟಿಗಳಿಂದ ಬರೆಯಲಿಲ್ಲ.

ಪ್ರಶ್ನೆ : ಈಗ ಹೊಸದೇನಾದರೂ ಬರೆಯುತ್ತಿದ್ದೀರೇನು ?

ಉತ್ತರ : ಹೌದು. ಅದೂ ಐತಿಹಾಸಿಕವೇ. ಬಸವೇಶ್ವರ—ಬಿಜ್ಜಳರ ಕಾಲಕ್ಕೆ ಸಂಬಂಧಿಸಿದ್ದು. ಬಹಳ ವಿಶಿಷ್ಟವಾದ intellectual movementನ್ನು 'ಅನುಭವ ಮಂಟಪ'ದಲ್ಲಿ ಕಾಣುತ್ತೇವೆ. ಎಷ್ಟೊಂದು ಪ್ರಜ್ವಲವಾಗಿದ್ದದ್ದು ಇದ್ದಕ್ಕಿದ್ದ ಹಾಗೆ ನಾಶವಾಯಿತು. ಈ ಹಿನ್ನೆಲೆಯನ್ನು ಶೋಧಿಸಬೇಕೆಂದಿದ್ದೇನೆ.

ಪ್ರಶ್ನೆ: ಆಧುನಿಕ ಸಾಹಿತ್ಯದ ಅಲೆಗಳು (modern trends) ನಿಮ್ಮ ಮೇಲೆ ಮಾಡಿದ ಪ್ರಭಾವ ಎಷ್ಟು?

ಉತ್ತರ: ನಾನು ಅವುಗಳನ್ನು ಎಲ್ಲೂ ಪ್ರಜ್ಞಾಪೂರ್ವಕ ಬಳಸಲಿಲ್ಲ. ಆದರೆ ಅವುಗಳನ್ನು ಯಾವತ್ತೂ ಓದುತ್ತಿರುವುದರಿಂದ ಅವುಗಳಿಂದ ಪ್ರಭಾವಿತನಂತೂ ಆಗಿದ್ದೇನೆ. ನನಗೆ ನನ್ನದೇ ಸ್ವಶಿಕೆ ತರಬೇಕಾಗಿದೆ.

ಪ್ರಶ್ನೆ; ದೇವರ ಅಸ್ತಿತ್ವದ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉತ್ತರ: ಅದರ ಉತ್ತರ ಅಷ್ಟು ಸುಲಭವಾಗಿದೆಯೇ? ನಾನು ದೇವರನ್ನು ನಂಬುವುದೆಂದರೆ ಅದೊಂದು ಭಾರದ ಕೆಲಸವೇ (burden) ಎಂದು ಅನಿಸುತ್ತದೆ! ●

(ಈ ಲೇಖನವನ್ನು ಕಳಿಸುವ ವ್ಯವಸ್ಥೆ ಮಾಡಿದ ಡಾ॥ ಶ್ರೀನಿವಾಸ ಹಾವನೂರ್‌ರವರಿಗೆ 'ಶೂದ್ರ' ಋಣಿಯಾಗಿದೆ.)

# ಒಳನೋಟ

—ಯಶವಂತಚಿತ್ತಾಲ

'ಶೂದ್ರ'ದ ಫೆಬ್ರುವರಿ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ರಾಮಚಂದ್ರ ಶರ್ಮರ ಟಿಪ್ಪಣಿಯನ್ನು ಕುರಿತು ಎರಡು ಮಾತುಗಳು :

೧. ಭಾಷಣದಲ್ಲಿ ನಾನು ವ್ಯಕ್ತಪಡಿಸಿದ ವಿಚಾರಗಳನ್ನು ಸಂಗ್ರಹಿಸಿಕೊಟ್ಟು, ಅವುಗಳಲ್ಲಿ "ಅಗ್ರಾಹ್ಯವಾದದ್ದಾಗಲೀ, ಆಕ್ಷೇಪಣೆಗೆ ಗುರಿಯಾಗುವಂತಹದ್ದಾಗಲೀ, ಇಲ್ಲ" ಎಂದು ಹೇಳುವ ಶರ್ಮರು ಮುಂದೆ–"ನನ್ನ ಪ್ರಶ್ನೆ ಸೃಜನಶೀಲ ಸಾಹಿತಿಯೊಬ್ಬ ತನ್ನ ಸೃಷ್ಟಿಕಾರ್ಯದ ಬಗ್ಗೆ ವ್ಯಾಖ್ಯಾನ ಮಾಡುವುದರಲ್ಲಿನ ಔಚಿತ್ಯಕ್ಕೆ ಸಂಬಂಧಿಸಿದ್ದು." ಎಂದು ಭಾಷಣದ ವಿಷಯದ ಆಯ್ಕೆಯನ್ನೆಲ್ಲ ಪ್ರಶ್ನಿಸುತ್ತಾರೆ.

ಸ್ಪಷ್ಟ ಪಡಿಸ ಬಯಸುವ ಸಂಗತಿ : "ನನ್ನ ಸೃಷ್ಟಿಕಾರ್ಯ" ನಾನೇ ಆಯ್ದುಕೊಂಡ ವಿಷಯವಾಗಿರಲಿಲ್ಲ. ನನಗೆ ಕೊಟ್ಟದ್ದಾಗಿತ್ತು. ಕಮ್ಮಟದ ನಿರ್ದೇಶಕರೇ ಸೂಚಿಸಿದ ಶೀರ್ಷಿಕೆ– "ನನ್ನ ಕೃತಿಗಳು ಮತ್ತು ಕನ್ನಡ ಕಾದಂಬರಿ ಪರಂಪರೆ" ಎಂಬುದಾಗಿತ್ತು !

೨. ನನ್ನ ಕಾದಂಬರಿಗಳ ಬಗ್ಗೆ ನಾನೇ ಮಾತನಾಡುವ ಕಷ್ಟವನ್ನು ಅರಿತೇ ನಾನು ನನ್ನ ಭಾಷಣದ ವಿಷಯವನ್ನು ಎರಡು ಭಾಗಗಳಲ್ಲಿ ಸಂಘಟಿಸಿದ್ದೆ.

(ಅ) ಮೊದಲನೇ ಭಾಗದಲ್ಲಿ 'ಕಾದಂಬರಿ' ಎಂಬ ಸಾಹಿತ್ಯ ಪ್ರಕಾರದ ಬಗೆಗಿನ ನನ್ನ ವಿಚಾರಗಳನ್ನು-ಸಾಹಿತ್ಯದಲ್ಲಿ ಒದಗುವ ಸೃಜನಪ್ರಕ್ರಿಯೆಯ ನೆಲೆಯಿಂದ ಆಡಿದ ಸೈದ್ಧಾಂತಿಕ ಮಾತುಗಳನ್ನು ಹಿನ್ನೆಲೆಯಾಗಿ ಕೊಟ್ಟಿದ್ದೆ.

ಶರ್ಮರು ಸಂಗ್ರಹಿಸಿಕೊಟ್ಟ ಎಲ್ಲ ವಿಚಾರಗಳೂ ಈ ಭಾಗಕ್ಕೆ ಸೇರಿದವುಗಳು ಎನ್ನುವುದನ್ನು ನೆನೆಯಬೇಕು.

(ಬ) ಭಾಷಣದ ಎರಡನೇ ಭಾಗದಲ್ಲಿ ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ನನ್ನ ಕಾದಂಬರಿಗಳ ಬಗ್ಗೆ ನಾನೇ ಒಬ್ಬ ಓದುಗನಾಗಿ ಹೇಳಲು, ಯಾವ ಲೇಖಕನಿಗೂ ತನ್ನ ಕೃತಿಯ ಹೊರಗೆ ನಿಂತು ಹೇಳಲು ಸಾಧ್ಯವಾದ ಮಾತುಗಳನ್ನಷ್ಟೇ ಸಂಗ್ರಹಿಸಿದ್ದೆ.

ದುರ್ದೈವದ ಸಂಗತಿಯೆಂದರೆ, ಹಿನ್ನೆಲೆಯ ಸೈದ್ಧಾಂತಿಕ ಮಾತುಗಳೇ ಬಹಳ ಹೊತ್ತು ತೆಗೆದುಕೊಂಡಿದ್ದರಿಂದ ನನ್ನ ಕೃತಿಗಳ ಬಗ್ಗೆ ಹೇಳಬೇಕೆಂದುಕೊಂಡದ್ದರಲ್ಲಿ ಬಹಳಷ್ಟನ್ನು ಹೇಳಲು ಸಾಧ್ಯವಾಗದೇ ಹೋಯಿತು.

೩. ರಾಮಚಂದ್ರ ಶರ್ಮರ ಟಿಪ್ಪಣಿ ಈ ವಸ್ತು-ಸ್ಥಿತಿಗೆ ಸರಿಯಾಗಿ ವಿರುದ್ಧವಾದ ಕಲ್ಪನೆ ಕೊಡುವಂತಹದಾಗಿದೆ. ಇದಕ್ಕೆ ಕಾರಣ ಸಾಹಿತ್ಯವೆಂಬ ಮಾನವೀಯ ಚಟುವಟಿಕೆಯ ಬಗ್ಗೆ ನಾನಾಡಿದ ಮಾತುಗಳನ್ನು ನನ್ನ ಸೃಷ್ಟಿಪ್ರಕ್ರಿಯೆಯ ಬಗೆಗಿನ ಮಾತುಗಳೆಂದು ತಪ್ಪಾಗಿ ಕರೆದದ್ದು. ಶರ್ಮರೇ ಸಂಗ್ರಹಿಸಿಕೊಟ್ಟ ವಿಚಾರಗಳನ್ನು ಗಮನಿಸಿದರೂ ಇವು ಕೇವಲ ನನ್ನೊಬ್ಬನ ಸೃಷ್ಟಿ ಪ್ರಕ್ರಿಯೆಗೆ ಸಂಬಂಧಿಸಿದ ಮಾತುಗಳಲ್ಲ ಎನ್ನುವದು ಯಾರಿಗೂ ಹೊಳೆದೀತು. ಶರ್ಮರಿಗೂ ಹೊಳೆದಿದೆ ಎಂಬುದನ್ನು ಅವರ ಮಾತೇ ಸ್ಪಷ್ಟಪಡಿಸುತ್ತದೆ. "ಚಿತ್ತಾಲರು ಆಡಿದ್ದರಲ್ಲಿ ಅಗ್ರಾಹ್ಯವಾದದ್ದಾಗಲೀ ಅಥವಾ ಆಕ್ಷೇಪಣೆಗೆ ಗುರಿಯಾಗುವಂತಹದಾಗಲೀ ಇಲ್ಲ. ಕಾದಂಬರಿಯ ಸೃಷ್ಟಿಯ ಬಗ್ಗೆ ಅವರು ಮಾತಾಡಿದರೂ ಅವರು ಕೊಟ್ಟ ಮಾಡೆಲ್ ಕಾವ್ಯ ಸೃಷ್ಟಿಗೂ ಅನ್ವಯವಾಗುವಂತಹದೆನ್ನುವುದು ನನ್ನ ಅನಿಸಿಕೆ."

ಕೇವಲ ಕಾದಂಬರಿಗೆ ಮಾತ್ರವಲ್ಲದೆ ಕಾವ್ಯಕ್ಕೂ ಅನ್ವಯಿಸುವಷ್ಟು ವ್ಯಾಪಕವಾದ ಅರ್ಥವುಳ್ಳ ಮಾತುಗಳನ್ನು ನಾನು ಕೇವಲ ನನ್ನ ಕೃತಿಗಳಿಗೆ ಅನ್ವಯಿಸಿ ಮಾತನಾಡುವುದು ಸಾಧ್ಯವೆಂದು ನನಗಂತೂ ತೋರುವುದಿಲ್ಲ. ಮಾತನಾಡಿಯೂ ಇರಲಿಲ್ಲ!

೪. ಇನ್ನು ನನ್ನ ಕೃತಿಗಳ ಬಗೆಗೆ ನಾನೇ ಮಾತನಾಡಿದ್ದು: ಮುಖ್ಯವಾಗಿ 'ಮೂರು ದಾರಿಗಳು' ಕಾದಂಬರಿಯ ಕಾಲವಿನ್ಯಾಸವನ್ನು ಕುರಿತು; ವ್ಯಕ್ತಿಯ ಬೆಳವಣಿಗೆಯನ್ನು ಚಿತ್ರಿಸುವಾಗಲೇ ಅದಕ್ಕೆ ಅಡ್ಡ ಬರುವ ಸಮಾಜದ ಅನಾರೋಗ್ಯವನ್ನು ಚಿತ್ರಿಸುವ 'ಶಿಕಾರಿ'ಯ ತಾಂತ್ರಿಕ ವೈಶಿಷ್ಟ್ಯವನ್ನು ಕುರಿತು; 'ಛೇದ' ದಲ್ಲಿ ಮಾನವೀಯ ಅನುಭವದಲ್ಲಿಯ ಕಂದರಗಳೇ ವಸ್ತುವಾಗಿರುವುದನ್ನು ಕುರಿತು; ಪದ್ಯ ಬರೆಯುತ್ತಿದ್ದ 'ಪುರುಷೋತ್ತಮ' ಅದು ತಲೆಮಾರುಗಳ ಕಾದಂಬರಿಯಾಗುವ ಶಕ್ಯತೆಯನ್ನು ಕುರಿತು ಕೆಲವೇ ಕೆಲವು ಮಾತುಗಳನ್ನು ಹೇಳಿದ್ದೆ. ಹಾಗೂ ಆ ಮಾತುಗಳು ನನ್ನ ಭಾಷಣದ ಅತ್ಯಂತ ಸಣ್ಣ ಭಾಗವಾಗಿದ್ದವು.

೫. ಇಷ್ಟೆಲ್ಲ ಹೇಳಿದ ಮೇಲೆ ಒಂದು ಮಾತನ್ನು ಒಪ್ಪಿಕೊಳ್ಳಬಹುದೇನೋ: ಸೃಜನಶೀಲ ಸಾಹಿತಿಯೊಬ್ಬ ತನ್ನ ಬರೆಯುವ ಅನುಭವದ ಬಗ್ಗೆ-ಅದರ ಕೆಲವು ಮಗ್ಗಲುಗಳ ಬಗೆಗಾದರೂ—ಬರೆಯುವುದು ಅಸಾಧ್ಯವೆಂದಾಗಲೀ ಅಸಾಧುವೆಂದಾಗಲೀ ನಾನು ತಿಳಿಯುವುದಿಲ್ಲ. ಗರ್ಶಿಯಾ ಮಾರ್ಕೆಜ್ ಅವರ 'ದಿ ಫ್ರೆಗ್ರನ್ಸ್ ಆಫ್ ಗ್ವಾವಾ' ಹಾಗೂ 'ಪ್ಯಾರಿಸ್ ರಿವ್ಯೂ' ಸಂದರ್ಶನಗಳನ್ನು ಒಳಗೊಂಡ 'ರ್‍ಯಾಟರ್ಸ್ ಆ್ಯಟ್ ವರ್ಕ್' ಎಂಬ ಪುಸ್ತಕಗಳ ಉದಾಹರಣೆ ಈ ಟಿಪ್ಪಣಿಯ ಮಟ್ಟಿಗೆ ಸಾಕೇನೋ!



# ಕನಸಿಗೊಂದು ಕಣ್ಣು

ಅಲೆಮಾರಿ ಲಕ್ಷ್ಮಣರಾಜು

ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ನನ್ನ ಗೆಳೆಯನೊಬ್ಬ ಸದಾ ಹುಡುಗಿಯರ ಕೈಹಿಡಿದು ಭವಿಷ್ಯ ಹೇಳುತ್ತಿದ್ದ. ಅದನ್ನು ನೋಡಿ ಹೊಟ್ಟೆಕಿಚ್ಚಿನಿಂದ ನರಳುತ್ತಿದ್ದೆ. ನನ್ನಹಾಗೆ ಬಹಳಷ್ಟು ಗೆಳೆಯರು. ಆಗ ನಾವು ಹುಡುಗಿಯರ ಕೈ ಹಿಡಿಯಲು ಭಯ–ಸಂಕೋಚ–ನಾಚಿಕೆಯನ್ನು ತುಂಬಿಕೊಂಡಿದ್ದ ಕಾಲವದು. ಈಗ ಅವೆಲ್ಲ ನೆನಪುಮಾಡಿಕೊಳ್ಳಲು ರೋಚಕವಾದ ವಿಷಯಗಳು.

ನಮ್ಮ ಭೂತ-ವರ್ತಮಾನ-ಭವಿಷ್ಯತ್ತುಗಳು ಒಂದು ರೀತಿಯ ವಿಚಿತ್ರ ಸಂಬಂಧವನ್ನು ಪಡೆದಿರುವುದರಿಂದ ಬಡವನಿಂದ ಶ್ರೀಮಂತನವರೆವಿಗೆ ಈ ಮೂರರ ಅವಿನಾ ಸಂಬಂಧದಲ್ಲಿ ಒದ್ದಾಡುತ್ತಲೇ ಇರುತ್ತಾನೆ. ಇದಕ್ಕೆ ಅವನ ರಕ್ಷಣೆಯನ್ನು ಬಯಸುವ ಮನಸ್ಸೇ ಕಾರಣವಿರಬಹುದು. ಒಂದು ದೃಷ್ಟಿಯಿಂದ ಮನುಷ್ಯ ರ್‍ಯಾಡಿಕಲ್ ಆಗಿರುವುದೇ ಒಳ್ಳೆಯದು. ಕೊನೆಯಪಕ್ಷ 'ಕಾಲ' ಕೊಡುವ ಒತ್ತಡಗಳಿಂದ ಸ್ವಲ್ಪಮಟ್ಟಿಗೆ ಬಿಡುಗಡೆಯನ್ನು ಪಡೆದಿರುತ್ತಾನೆ. ಮನುಷ್ಯನ ದುರ್ಬಲ ಮನಸ್ಸನ್ನು ತಿಳಿದೇ ನಾನಾ ಕಾಲಗಳ ಬಗ್ಗೆ ನುಡಿಯುವ ಬಣ್ಣಬಣ್ಣದ ವ್ಯಕ್ತಿಗಳು ಸಿಗುತ್ತಾರೆ. ಇವರಲ್ಲಿ ದೇಶ ಸುತ್ತುವ ಬುಡಬುಡಿಕೆಯವರು ಬೆಳಿಗ್ಗೆ ಎದ್ದಾಕ್ಷಣ ಮನೆಯ ಮುಂದೆ ಭವಿಷ್ಯ ನುಡಿಯುತ್ತ ನಿಲ್ಲುವುದನ್ನು ಕಾಣಬಹುದು. ಹಿಂದೆ ಇದೇ ಕಾಲಂನಲ್ಲಿ ನನ್ನ ಪರಿಚಯದವರೊಬ್ಬರು ಭವಿಷ್ಯ ನುಡಿಯುವುದರ ಬಗ್ಗೆ ಪ್ರಸ್ತಾಪಿಸಿದ್ದೆ. ಒಮ್ಮೆ ಆ ಮನುಷ್ಯ ಹೇಳಿದ್ದ: "ನನ್ನ ಹತ್ತಿರ ಮಕ್ಕಳನ್ನು ಪಡೆಯಲು ಭವಿಷ್ಯ ಕೇಳಲು ಬರ್ತಾರೆ". ಅಂದರೆ ತನ್ನ ಗಂಡ ಯಾವ ಸಮಯದಲ್ಲಿ ಸಂಭೋಗ ಕ್ರಿಯೆ ನಡೆಸಿದರೆ ಮಗುವಾಗಬಹುದು ಎಂಬ ಕಾರಣಕ್ಕಾಗಿ. ಇವೆಲ್ಲ ಮೇಲ್ನೋಟಕ್ಕೆ ಹಾಸ್ಯಾಸ್ಪದವಾಗಿ ಕಂಡರೂ ಅದರ ಹಿಂದಿರುವ ಅಸಹಾಯಕತೆಯ ತೀವ್ರತೆ ಒಬ್ಬೊಬ್ಬರಿಗೆ ಒಂದೊಂದು ರೀತಿಯಲ್ಲಿ ಕಾಣಬಹುದು. ಕೆಲವು ದಿನಗಳ ಹಿಂದೆ ಕೆಲವು ಗೆಳತಿಯರ ಜೊತೆಯಲ್ಲಿ ಕಾಫಿಗೆ ಹೋದಾಗ ಮುಂದೆ ಕೂತಿದ್ದ ಬ್ರಾಹ್ಮಣ ಹುಡುಗಿಯೊಬ್ಬಳು ನನ್ನ ಹಸ್ತದಲ್ಲಿಯ ನೇರಗೆರೆಯೊಂದನ್ನು ನೋಡಿ, "ಶ್ರೀನಿವಾಸ್‌ಗ ಸಾಕಷ್ಟು ದುಡ್ಡು ಸಿಗುವುದು. ಆದರೆ ದುಡ್ಡನ್ನು ಮಾತ್ರ ವೆಚ್ಚಮಾಡುವುದಿಲ್ಲ" ಎಂದಾಗ ಪಕ್ಕದಲ್ಲಿ

---

ಖಾಸಗಿ ಪತ್ರ-34

ಕೂತಿದ್ದ ದಲಿತರ ಹುಡುಗಿಯೊಬ್ಬಳು ತನ್ನ ಕೈಯನ್ನು ನೀಡಿದಾಗ: "ಹೋಗೆ ನಿನ್ನ ಕೈಯಲ್ಲಿ ಗೆರೆಗಳೇ ಕಾಣುವುದಿಲ್ಲ" ಎಂದಾಗ ಆ ದಲಿತ ಕನ್ಯೆಯ ಮುಖದಲ್ಲಿ ವಿಷಾದದ ಗೆರೆಗಳು ಹಾದುಹೋಗಿರಬಹುದು. ಕೊನೆಗೆ "ನನಗೆ ಬರುವ ದುಡ್ಡನ್ನು ಹಂಚಿಬಿಡುವೆ" ಎಂದು ಆ ಸದ್ಯದ ಮಾತನ್ನು ಮುಗಿಸಿದೆ. ಮಾತು ಮುಗಿಸುವ ಮುನ್ನ "ದುಡ್ಡು ಎಂದುಸಿಗುವುದು" ಎಂದಿದ್ದಕ್ಕೆ ಆ ಹುಡುಗಿಯ ಹತ್ತಿರ ಉತ್ತರ ವಿರಲಿಲ್ಲ.

ಫೆಬ್ರವರಿ ಎಂಟರಂದು ಶನಿವಾರ ಮಧ್ಯಾಹ್ನ ಒಂದೂವರೆಯಾಗಿತ್ತು. ಬಿಸಿಲು ಭಯಂಕರವಾಗಿ ಸುಡುತ್ತಿದ್ದುದರಿಂದ ಹೊರಗೆ ಓಡಾಡುವುದೇ ಕಷ್ಟವಾಗಿತ್ತು. ಆದರಲ್ಲೂ ಊಟಮಾಡಿ ಹೊರಗೆ ಹೋಗುವುದೆಂದರೆ ಮತ್ತಷ್ಟು ಕಷ್ಟದ ಕೆಲಸ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಇಂಥ ಊಟ ನನ್ನ ಪ್ರೀತಿಯ ಮೇಷ್ಟ್ರು ದ-ಕವಿಯಾದ ಜಿ. ಎಸ್. ಶಿವರುದ್ರಪ್ಪನವರಿಗೆ ಅರವತ್ತು ವರ್ಷ ತುಂಬಿದ್ದಕ್ಕೆ ಸಿಕ್ಕಿತ್ತು. ಜಿ. ಎಸ್. ಎಸ್. ರವರಿಗೆ ಪ್ರಿಯರಾದ ಸಾಕಷ್ಟು ಹಿರಿಯ-ಕಿರಿಯ ಗೆಳೆಯರು ಬಂದಿದ್ದರು. ಆಗತಾನೇ ಆರೋಗ್ಯ ಸುಧಾರಿಸಿಕೊಂಡಿದ್ದ ಜಿ. ಎಸ್. ಎಸ್. ತಮ್ಮ ಮಾಮೂಲಿ ಪುಟ್ಟ ಹುಡುಗನ ಗಡಿಬಿಡಿಯ ನಡಿಗೆಯಲ್ಲಿ ಎಲ್ಲರನ್ನು ಬರಮಾಡಿಕೊಂಡು ಊಟ ಮಾಡಿಸುತ್ತಿದ್ದರು.

ಊಟವಾದ ನಂತರ ಕೆಲವರು ಕಾರುಗಳಲ್ಲಿ, ಸ್ಕೂಟರ್‌ಗಳಲ್ಲಿ ಓಡಿಹೋದರು. ಗೆಳೆಯ ಡಿ. ಆರ್. ನಾಗರಾಜ್ ಮನೆಗೆ ಒಂದಷ್ಟು ಮಂದಿ ನುಗ್ಗಿದರು. ನನಗೆ ಬೇರೆ ತುರ್ತು ಕೆಲಸವಿದ್ದುದರಿಂದ ಅವರೊಡನೆ ಹೋಗದೆ ಬಸ್‌ಸ್ಟಾಪ್‌ನತ್ತ ಹೊರಟೆ. ಜೊತೆಯಲ್ಲಿ ನನ್ನ ಮಾಜಿ ಅಧ್ಯಾಪಕರೊಬ್ಬರು ಇದ್ದರು. ಸ್ಟಾಪ್ ತುಂಬ ದೂರವಿದ್ದುದರಿಂದ ಬಿಸಿಲಿನ ತೀವ್ರತೆ ಅರ್ಥವಾಗತೊಡಗಿತ್ತು. ಸೂರ್ಯನಿಗೆ ಅಡ್ಡವಾಗಿ ಕೈಯಲ್ಲಿದ್ದ ಪುಸ್ತಕವನ್ನು ಹಿಡಿದುಕೊಂಡಿದ್ದೆ. ಸ್ಟಾಪು ಬಂತು. ಅಲ್ಲಿ ಗೆಳೆಯ ಎ. ಪಿ. ಎಸ್. ಕಾಲೇಜಿನ ಕನ್ನಡ ಅಧ್ಯಾಪಕ ಮಧುಸೂದನ ಇದ್ದರು. ಆತನ ಜೊತೆಯಲ್ಲಿ ವರ್ಣರಂಜಿತ ವ್ಯಕ್ತಿಯೊಬ್ಬ ಇದ್ದ. ಆತನನ್ನು ನೋಡಿದಾಕ್ಷಣ ನಾಟಕದಲ್ಲಿಯ ಏಕಲವ್ಯನ ಚಿತ್ರ ನೆನಪಿಗೆ ಬಂತು. ಯಾಕೆಂದರೆ ತಲೆಗೆ ಕೆಂಪು ವಸ್ತ್ರ ಬಿಗಿದಿದ್ದ. ಅದರ ಒಂದಂಚು ಕೃಷ್ಣನ ನವಿಲುಗರಿಯಂತೆ ಎದ್ದು ನಿಂತಿತ್ತು. ಕಿವಿಯಲ್ಲಿ ಬಳೆಯಾಕಾರದ ಕಿವಿಯುಂಗುರಗಳು ನೇತಾಡುತ್ತಿದ್ದವು. ಕತ್ತಲ್ಲಿ ಬಣ್ಣಬಣ್ಣದ ಶಿಲೆಯ ಮಣಿಗಳ ಸರವೊಂದಿತ್ತು. ಮೈಮೇಲೆ ಬಟ್ಟೆ ಇರಲಿಲ್ಲ. ಮೊಣಕಾಲಿನಿಂದ ಮೇಲಕ್ಕೆ ಕೆಂಪನೆಯ ವಸ್ತ್ರವನ್ನು ಕಚ್ಚೆಯಾಗಿ ಬಿಗಿದಿದ್ದ. ಒಂದು ಕಾಲಲ್ಲಿ ದಪ್ಪನೆಯ ತಾಮ್ರದ ಬಳೆ. ತಲೆಯಿಂದ ಮೇಲಕ್ಕೆದ್ದು ಕಾಣುತ್ತಿದ್ದ ಗುಂಗುರು ಕೂದಲು. ಅತ್ಯಂತ ಕಪ್ಪಗಿದ್ದ.

ಮಿಣಮಿಣ ಮಿಂಚುತ್ತಿತ್ತು ಅವನ ಚರ್ಮ. ಆಳು ಗಟ್ಟುಮುಟ್ಟಾಗಿದ್ದ. ವಯಸ್ಸು ಬಹಳ ಹೆಚ್ಚೆಂದರೆ ಮೂವತ್ತಿರಬಹುದು. ಒಟ್ಟಿನಲ್ಲಿ ಆಕರ್ಷಕವಾಗಿ ಎದ್ದು ಕಾಣುತ್ತಿದ್ದ. ಆದರೆ ಒಂದು ಕಣ್ಣಿರಲಿಲ್ಲ. ಅದು ಅವನ ಸೌಂದರ್ಯಕ್ಕೆ ಅಡ್ಡಿಯಾಗಿರಲಿಲ್ಲ. ನಾವು ಬಸ್‌ಸ್ಟಾಪಿಗೆ ಹೋದಾಗ ಗೆಳೆಯ ಮಧುಸೂದನರವರು ಇದ್ದರು. ಆ 'ಆಲೆಮಾರಿ'ಯ ಹತ್ತಿರ ತಾಳಿಗರಿಯ ಶಾಸನಗಳ ಬಗ್ಗೆ ವಿಚಾರಿಸುತ್ತಿದ್ದರು. ಆ ಮನುಷ್ಯನ ವೇಷ ಭೂಷಣಗಳನ್ನು ನೋಡಿ 'ಎಲ್ಲಿಂದ ಬಂದಿದ್ದೀಯ ?" ಎಂದಿದ್ದಕ್ಕೆ ದೊಡ್ಡ ಭಾಷಣ ವನ್ನೇ ಕೊಟ್ಟ.

ಅವನ ಹೆಸರು ಲಕ್ಷ್ಮಣರಾಜು. ಆಂಧ್ರದ ಗುಡ್ಡಗಾಡಿನ ಪ್ರದೇಶದವನಾದರೂ ದೇಶಸಂಚಾರಿ. ತಾನೊಬ್ಬನೇ ಅಲ್ಲ, ತನ್ನ ಮನೆತನವೇ ಹಾಗೆ ಎಂದು ಹೇಳುವಲ್ಲಿಯ ಧ್ವನಿಯಲ್ಲಿ ಅಭಿಮಾನದ ಅಹಂ ಇತ್ತು. ಇದರ ಜೊತೆಗೆ ಗುಡ್ಡಗಾಡಿನಲ್ಲಿ ರಾಜ ಮನೆತನದ ವಂಶಕ್ಕೆ ಸೇರಿದವರು ಎಂಬ ಮಾತನ್ನು ಸ್ವಾರಸ್ಯಕರವಾಗಿ ಹೇಳಿದನಂತರ, ಇದ್ದಕ್ಕಿದಂತೆ ನಮ್ಮ ಜೊತೆಯಲ್ಲಿದ್ದ ಅಧ್ಯಾಪಕರ ಮುಖನೋಡಿ ; ನಿಮ್ಮ ಮುಖದಲ್ಲಿ ರಾಜಕಳೆಯಿದೆ. ನಿಮ್ಮ ಹೆಂಡತಿ ಲಕ್ಷ್ಮಿ ಇದ್ದ ಹಾಗೆ. ಆಕೆ ತೌರುಮನೆಯಿಂದ ಏನೂ ತಂದಿಲ್ಲ. ನೀವು ಈಗ ಒಂದು ಮನೆಯನ್ನು ಮಾಡಿದ್ದೀರಿ. ಇನ್ನೊಂದು; ಮನೆಯನ್ನು ಇಷ್ಟರಲ್ಲಿಯೇ ಕೊಂಡುಕೊಳ್ತೀರಿ ಎಂದು ಹೇಳಿದಾಗ ನನ್ನ ಮಾಜಿ ಅಧ್ಯಾಪಕರಿಗೆ ಖುಷಿಯಾಯಿತು. ''ಹೌದು ಆತ ಹೇಳುವುದೆಲ್ಲ ನಿಜ. ನಿನ್ನೆತಾನೆ ಮತ್ತೊಂದು ಮನೆಗೆ ಅಡ್ವಾನ್ಸ್ ಕೊಟ್ಟುಬಂದೆ" ಎಂಬಮಾತನ್ನು ಸ್ವಲ್ಪ ಜಂಬದಿಂದಲೇ ಹೇಳಿದರು. ನಾನು ನಗುತ್ತ ನನ್ನ ಕೈನೋಡು ಎಂದೆ. "ನನಗೆ ಓದು ಬರಹ ಬರು ವುದಿಲ್ಲ. ಆದ್ದರಿಂದ ಕೈ ನೋಡುವುದಿಲ್ಲ. ಮುಖನೋಡಿ ಮಾತ್ರ ಹೇಳುವೆ. ಆದರೆ ಈಗ ಆಗುವುದಿಲ್ಲ. ನಾನು ಮುಖ ತೊಳೆಯಬೇಕು, ಟೀ ಕುಡಿಯಬೇಕು. ಆಗ ಸ್ಫೂರ್ತಿಬರುತ್ತೆ" ಎಂದ. ನಗುತ್ತ ಸುಮ್ಮನಾದೆ. ಲಕ್ಷ್ಮಣರಾಜ್ ತನ್ನ ಬ್ಯಾಗಿನಿಂದ ಏನನ್ನೋ ತೆಗೆದ. ಅದರಲ್ಲಿ ದೊಡ್ಡ ದೊಡ್ಡ ವ್ಯಕ್ತಿಗಳು ಕೊಟ್ಟ ಪ್ರಮಾಣಪತ್ರ ಗಳಿದ್ದವು. ನಂತರ ದೊಡ್ಡದಾದ ಆಲ್ಬಮ್ ತೆರೆದುತೋರಿಸಿದ. ನಿಜವಾಗಿಯೂ ಆಶ್ಚರ್ಯವಾಯಿತು. ಇಂದಿರಾಗಾಂಧಿ, ಸಂಜೀವರೆಡ್ಡಿ, ಮೊರಾರ್ಜಿ ದೇಸಾಯಿ ಚರಣಸಿಂಗ್, ಸಂಜಯಗಾಂಧಿ, ರಾಜೀವಗಾಂಧಿ, ಎನ್. ಟಿ. ಆರ್, ಆತನ ಮಗ, ಹೀಗೆ ಯಾರ್ಯಾರ ಜೊತೆಯಲ್ಲಿಯೋ ತೆಗೆಸಿಕೊಂಡ ಚಿತ್ರಗಳನ್ನು ನೋಡುತ್ತಿರುವಾಗಲೇ ಬಸ್ಸು ಬಂತು. ಓಡಿಹೋಗಿ ಬಸ್ಸೊಳಗೆ ಸೇರಿಕೊಂಡೆವು. ಕೂರಲು ಜಾಗಸಿಕ್ಕಿತು. ಮಾಜಿ ಅಧ್ಯಾಪಕರೇ ಆತನಿಗೆ ಟಿಕೆಟ್ ತಗೊಂಡರು. ಬಸ್ಸಿನಲ್ಲಿ ಮಾತುಕತೆಯ ನಡುವೆ ನನ್ನ ವಿಳಾಸ ಕೇಳಿದ, ಕೊಟ್ಟೆ. ಮನೆಗೆ ನಂಬರ್ ಇಲ್ಲವಲ್ಲ ಎಂದ. ಬೇಕಾಗಿಲ್ಲ, ಕಷ್ಟವಾದರೆ ಪೋಲಿಸ್ ಸ್ಟೇಷನ್‌ನಲ್ಲಿ ಕೇಳು ಎಂದೆ. ಅದಕ್ಕೆ ಪಕ್ಕದಲ್ಲಿ ನಿಂತಿದ್ದ ಹುಡುಗರು ನನ್ನನ್ನು ಗುಮಾನಿಯಿಂದ ನೋಡತೊಡಗಿದರು.

ಲಕ್ಷ್ಮಣರಾಜು ಇಲ್ಲಿಯವರೆವಿಗೆ ಬಂದಿಲ್ಲ. ನಾನಿಲ್ಲದಿದ್ದಾಗ ಬಂದಿದ್ದರೆ ಭಯಪಟ್ಟು ಮನೆಯೊಳಗೆ ಸೇರಿಸದೆ ಇರಬಹುದು. ಹಾಗೆಯೇ ಆ 'ಅಲೆಮಾರಿ' ಏನಾದರೂ ಭೀಕರ ತಪ್ಪುಮಾಡಿದರೆ ಆತನ ಹತ್ತಿರವಿರುವ ನನ್ನ ವಿಳಾಸ ಹುಡುಕಿಕೊಂಡು ಪೋಲೀಸರು ಬರಬಹುದು. ಏನೇ ಆಗಲಿ ಆತನನ್ನು ಮತ್ತೊಮ್ಮೆ ನೋಡುವ ಆಸೆ.

3-4-86

ಶೂದ್ರ ಶ್ರೀನಿವಾಸ್

---

## ಸಾದರ ಸ್ವೀಕಾರ

'ಅಲೆಗಳು' (ಕಥಾಸಂಕಲನ) ಕಾಳೇಗೌಡ ನಾಗವಾರ ಅಜಂತ ಪ್ರಕಾಶನ, ಕೆಂಗೇರಿ ಉಪನಗರ. ಬೆಂಗಳೂರು-560060

ಬೆಲೆ : 18-00

'ನಾಯಿ ಮತ್ತು ಪಿಂಚಣಿ' (ಕಥಾ ಸಂಕಲನ) ಶಾಂತರಸ.

ಬೆಲೆ : 16-00

'ಬಯಲು ಸೀಮೆಯ ಬಿಸಿಲು' (ಕವನ ಸಂಕಲನ) ಶಾಂತರಸ, ಸತ್ಯಸ್ನೇಹ ಪ್ರಕಾಶನ, ರಾಯಚೂರು-584101

ಬೆಲೆ : 8-00

'ಅರ್ಥ' (ಕವನ ಸಂಕಲನ) ರಾಜಿ, ಸುಂದರ ಪ್ರಕಾಶನ, ಧಾರವಾಡ.

ಬೆಲೆ : 6-00

'ಸೊನ್ನೆಗಳ ಸುತ್ತ' (ಕವನ ಸಂಕಲನ) ಎಂ. ವಿ. ಚಕ್ರಪಾಣಿ, ಪ್ರಕಾಶಕರು : ಸರ್ವೋದಯ ಯುವಕ ಸಂಘ, ಬಸರಕೋಡು. ಹಗರಿ ಬೊಮ್ಮನಹಳ್ಳಿ (ತಾ), ಬಳ್ಳಾರಿ ಜಿಲ್ಲೆ. ಬೆಲೆ : 10-00

## ನಿಮ್ಮ ಮಗುವನ್ನು ರೋಗಗಳಿಂದ ರಕ್ಷಿಸಿ

ಹುಟ್ಟಿದ ದಿನದಿಂದಲೇ ನಿಮ್ಮ ಮಗುವು ಅನೇಕ ಆರೋಗ್ಯದ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ಅಲ್ಲದೆ ಮಗುವು ಹಲವಾರು ಸಾಂಕ್ರಾಮಿಕ ರೋಗಗಳಿಗೆ ತುತ್ತಾಗುವ ಸಾಧ್ಯತೆ ಇರುತ್ತದೆ.

ಮಗುವಿನಲ್ಲಿ ರೋಗ ನಿರೋಧಕ ಶಕ್ತಿ ಸ್ವಾಭಾವಿಕವಾಗಿ ಕಡಿಮೆ ಇರುತ್ತದೆ.

ಎಂತಲೇ, ನಿಮ್ಮ ಮಗುವನ್ನು ರೋಗಗಳಿಗೆ ತುತ್ತಾಗದಂತೆ ಕಾಪಾಡುವುದು ಅತ್ಯಂತ ಅವಶ್ಯಕ.

ನಿಮ್ಮ ಮಗುವಿಗೆ ರೋಗ ನಿರೋಧಕ ಚುಚ್ಚು ಮದ್ದುಗಳನ್ನು ಕೊಡಿಸಿ.

ಕ್ಷಯ, ಗಂಟಲುಬೇನೆ, ನಾಯಿಕೆಮ್ಮು ಹಾಗೂ ಮಿೂಸಲ್ಸ್ (ಗೊಬ್ಬರ) ಈ ರೋಗಗಳನ್ನು ತಡೆಗಟ್ಟಲು ನಿಮ್ಮ ಮಗುವಿಗೆ ಒಂದು ವರ್ಷದೊಳಗೆ ಚುಚ್ಚು ಮದ್ದುಗಳನ್ನು ಹಾಕಿಸಿ, ಹಾಗೂ ಪೋಲಿಯೋ ತಡೆಯಲು 'ತೊಟ್ಟು' ಔಷಧಿಯನ್ನು ಕೊಡಿಸಿ.

| ಮಗುವಿನ ವಯಸ್ಸು | ಕೊಡಬೇಕಾದ ಲಸಿಕೆ | ಪ್ರಮಾಣ |
|---|---|---|
| 3 ರಿಂದ 9 ತಿಂಗಳು | ಅ) ತ್ರಿರೋಗ–ಅಂದರೆ ಧನುರ್ವಾಯು ನಾಯಿಕೆಮ್ಮು, ಗಂಟಲುಬೇನೆಗಳ ವಿರುದ್ಧ | 3 ಬಾರಿ 1 ರಿಂದ 2 ತಿಂಗಳ ಅಂತರದಲ್ಲಿ |
| | ಆ) ಪೋಲಿಯೋ (ಅಂಗವಿಕಲತೆ) | 3 ಬಾರಿ 1 ರಿಂದ 2 ತಿಂಗಳ ಅಂತರದಲ್ಲಿ |
| | ಇ) ಕ್ಷಯರೋಗ ವಿರುದ್ಧ —ಬಿ.ಸಿ.ಜಿ | ಒಂದು ಬಾರಿ |
| 9 ರಿಂದ 12 ತಿಂಗಳು | ಮಿೂಸಲ್ಸ್ | ಒಂದು ಬಾರಿ |

ಹೆಚ್ಚಿನ ವಿವರಗಳಿಗೆ ಇವರನ್ನು ಸಂಪರ್ಕಿಸಿರಿ :

ನಿರ್ದೇಶಕರು,
ಸಮಾಜ ಕಲ್ಯಾಣ ಇಲಾಖೆ
ಕರ್ನಾಟಕ ಸರ್ಕಾರ, ಬೆಂಗಳೂರು.

F/NP/UKRN/72 No. M (2) PRB 210/73/74

Shoodra Kannada Monthly

ಮೇ ಸಂಚಿಕೆಯಲ್ಲಿ :

ಅಬ್ರಹಾಂ ಅಯಿರು ಕುಜಿಯಲ್--ಕೆ. ವಿ. ನಾರಾಯಣ--ಪ್ರಸನ್ನ ಕೆ. ವಿ ತಿರುಮಲೇಶ್--ಉತ್ತನೂರು ರಾಜಲಕ್ಷ್ಮಮ್ಮ—ಎಂ. ಲಿಂಗರಾಜು ಧರಣೇಂದ್ರ ಕುರಕುರಿ—ವೇದವತಿದಾಸ್ —ಸುಮಿತ್ರ —ಕೆ. ನಟರಾಜ್ ನಾ. ಸು. ನಾಗೇಶ್ — ಶ್ರೀನಿವಾಸ್‌ಮೂರ್ತಿ — ಕನಸಿಗೊಂದು ಕಣ್ಣು ಪುಸ್ತಕ ವಿಮರ್ಶೆ—ಸುದ್ದಿಯ ಗುದ್ದಾಟ.



Printed at : Shalivahan Printers, Bangalore - 53

Editor & Publisher : M.SRINIVAS